ಉಷಾ ಸಾಹಿತ್ಯ ಮಾಲೆ—೯

# 'ಶಂಖವಾದ್ಯ'

ನಾ. ಕಸ್ತೂರಿ

ಉಷಾ ಸಾಹಿತ್ಯ ಮಾಲೆ
ಮೈಸೂರು

ಸಂಪಾದಕರು:

ರಾ. ವೆಂ. ಶ್ರೀನಿವಾಸ

ಉಷಾ ಸಾಹಿತ್ಯ ಮಾಲೆ, ಮೈಸೂರು

ಮೊದಲ ಮುದ್ರಣ: ಫೆಬ್ರುವರಿ, ೧೯೪೮



ಬೆಲೆ: ರೂ. ೧—೧೨—೦

ಮುದ್ರಕರು:

ಆರ್. ಎನ್. ಹಬ್ಬು

ಉಷಾ ಪ್ರೆಸ್

ನೀಲಗಿರಿ ರೋಡ್, ಮೈಸೂರು

# ನಮ್ಮ ಮಾತು

ಶ್ರೀಮಾನ್ ನಾ. ಕಸ್ತೂರಿಯವರು ಬರೆದ 'ಶಂಖವಾದ್ಯ' ಕಾದಂಬರಿಯನ್ನು ನಮ್ಮ ಮಾಲೆಯಲ್ಲಿ ಪ್ರಕಟಿಸಲು ಬಹಳ ಆನಂದವಾಗಿದೆ. ಶ್ರೀಯುತರ ಬರೆಹಕ್ಕಾಗಿ ಹಾತೊರೆಯುವ ಕನ್ನಡನಾಡು ಈ ಸುರಸ ಸರಸ ಕಾದಂಬರಿಯನ್ನು ಸುಸ್ವಾಗತಿಸಿ ಸಂತೋಷಗೊಳ್ಳಲಿ; ಅವರ ಇನ್ನೂ ಅನೇಕ ಕೃತಿಗಳು ನಮ್ಮ ಮಾಲೆಯಲ್ಲಿ ಬೇಗಬೇಗ ಬರಲಿ; ಈ ಮಾಲೆಗೆ ಕನ್ನಡಿಗರ ಪ್ರೋತ್ಸಾಹ ಹೆಚ್ಚಲಿ—ಇದೇ ನಮ್ಮ ಹಾರೈಕೆ.

ಶ್ರೀಮಾನ್ ಕಸ್ತೂರಿಯವರು ತಮ್ಮ ಈ ಕೃತಿಯನ್ನು ನಮ್ಮ ಮಾಲೆಯಲ್ಲಿ ಪ್ರಕಟಿಸಲು ಅನುಮತಿಯಿತ್ತುದಕ್ಕಾಗಿ ಅವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು

ಡಾ. ವೆಂ. ಶ್ರೀನಿವಾಸ

# ಒಳದನಿ

# ಗೋಕುಲ

"ಥೂ! ಈ ಹೊತ್ತು ಆ ನೀಲಿ ಸೂಟು ಬೇಡಿ, ಅಂದ್ರೆ!"

"ಇಲ್ಲ, ಇಲ್ಲ! ನೀನು ನೀಲಿ ಅಂತ ಗೇಲಿಮಾಡಿ ಅಪಶಕುನ ನುಡಿಯ ಬೇಡ....ಅದೇ ಇರಲಿ....ಅದೇ ಬೇಕು."

"ಅದು, ತುಂಬ ಬಿಗಿ ನಿಮಗೆ! ಆ ಹೊಟ್ಟೆಗೆ ಅಷ್ಟು ಸಂಕಟ ಕೊಡ ಬೇಡಿ, ದಮ್ಮಯ್ಯ. ನಿಮ್ಮ ಗುಂಡನೆಯ ಗುಂಡಿಗೆ ಗಾತ್ರಾನ ಆ ಗುಂಡಿಗಳು ತಡೆಯುತ್ತವೇನು? ಎಲ್ಲಿ! ಎಳೆದು ಕಾಜದೊಳಕ್ಕೆ ಸೇರಿಸಿ ನೋಡೋಣ.... ಎರಡನೆಯದನ್ನ?....ಸಾಧ್ಯವಿಲ್ಲ! ನಾನು ಕಾಣ್ತೆನೆ, ನಿಮ್ಮ ಸ್ವರೂಪಾನ!.... ಬೇಡಿ ಆ ನೀಲಿ ಸೂಟು! ನನ್ನ ಮಾತು ಕೇಳಿ."

"ಛೆ! ಈ ನೀಲಿ ಸೂಟು ಹಾಕಿಕೊಂಡೇನೆ ನಾನು ಮೊದಲು ಕೆಲಸಕ್ಕೆ ಸೇರಿದ್ದು, ಸರ್ಕಾರದಲ್ಲಿ. ಅದಕ್ಕೇ, ಇವತ್ತೂನು...."

"ಚೆನ್ನಾಯಿತು! ಮೂವತ್ತು ವರ್ಷದ ಹಿಂದಿನ ವ್ಯೆಯೆ ಇದು? ಅದನ್ನೇ ಈ ಹೊತ್ತಿಗೂ ಉಪಯೋಗಿಸೋಣ ಎಂದರೇನು? ನಿಮ್ಮ ಯೋಚನೆ ಚೆನ್ನಾಗಿದೆ....ನಾನು ಈಗ ನಮ್ಮ ಚಂಚೂನ ಕೊಂಕುಳಲ್ಲಿ ಕೂರಿಸಿಕೊಂಡು ತಿರುಗಾಡಲಾದೀತೆ? ಸೇರಿದ ದಿನ ಇದ್ದ ಅಲಂಕಾರವೇ, ಬಿಡುವ ದಿನವೂ ಇರಬೇಕು ಅಂತ ರೂಲ್ಸ್ ಮಾಡಿದಾರೇನು? ನನ್ನ ಮಾತು ಕೇಳಿ."

"ನಿನ್ನ ಮಾತು ಕೇಳಿ ಕೇಳೀನೆ...."

"ಆ! ಏನಂದ್ರಿ? ಗಟ್ಟಿಯಾಗಿ ಹೇಳಿ ಅದನ್ನೆ! ಅಯ್ಯೊ? ನಿಜ, ಅನ್ನಿ! ಗಂಡಸರಿಗೆ ಗುಣ ದೋಷ ಹೇಳಿಕೊಡುವ ಹೆಂಗಸರಿಗೆ ಬುದ್ಧಿ ಇಲ್ಲ, ಅಷ್ಟೆ. ಎಳೆಯ ಮಕ್ಕಳ ಹಾಗೆ ತಂಟೆ ಮಾಡುತ್ತೀರಲ್ಲಾ, ರಿಟೈರಾಗೋ ದಿವಸವೂ ಕೂಡ....ಅವಲಕ್ಷಣ! ಹಾಗೆಯೇ ಹೋಗಿ, ನನಗೇನು? ಅಯ್ಯೊ! ನಿಮ್ಮ ಮೋಟು ತೋಳು! ನಿಮ್ಮ ಕುಳ್ಳು ಕಾಲು!....ಅದು, ಹೇಗೆ ತುರುಕಿದಿರಿ ಇಡೀ ನಿಮ್ಮನ್ನ ಆ ತೂತುಗಳ ಮೂಲಕ? ಬಹಳ ಶ್ರಮಪಟ್ಟಿರಬೇಕು."

"ನಗಬೇಡ, ಕಣೆ! ನನಗೆ ರೇಗುತ್ತೆ. ರಿಟೈರಾಗುವ ದಿನ ಒಳ್ಳೇ ನವ ನವೀನವಾಗಿ ಇನ್ನೂ ಇಪ್ಪತ್ತು ವರ್ಷ ದುಡಿಯ ಬಲ್ಲೆ ಎಂಬ ಹೊಸ ಹುಡುಗನ ಹಾಗೆ ಕಾಣಿಸಲಿ, ಅವರಿಗೆ ಹೊಟ್ಟೆ ಉರಿಯಲಿ ಅಂತ...."

"ಅಹಹ! ಅಲ್ಲಿ ವಿಾಟಿಂಗಿಗೆ ಬಂದಿರುವವರೆಲ್ಲ ನವ ನವೀನ ಎಂದೇನೋ ಹೇಳುತ್ತಾರೆ, ಸರಿ. ಆರು ವರ್ಷದ ಹಿಂದೇನೆ ಆ ಸೂಟನ್ನ 'ಹಳೇ ನಿರಾಜಿ ಕಂಬಿ' ಯುವನಿಗೆ ಬಿಸಾಕೋಣ ಅಂತಿದ್ದೆ. ಭಾರಿ ಹಿತ್ತಾಳೆ ಡಬ್ಬಿ ಒಂದು ಕೊಡುತ್ತೇನೆ, ಅಂದ. ಜೊತೆಗೊಂದು ಬಟ್ಟಲೂ ಕೇಳಿದ. ಅರ್ಧ ಗಂಟೆ ಚೌಕಾಶಿ ಮಾಡಿ, ಕೊನೆಗೆ ಕೊಡದೆ, ತೊಲಗಿದ. ಅದೂ ಅಲ್ಲದೆ, ನನಗೆ, ಅಷ್ಟು ಹೊತ್ತಿಗೆ, ಇದನ್ನ ನಿಮಗೆ ನಮ್ಮಪ್ಪ ನನ್ನ ಮದುವೆ ದಿನ ಕೊಟ್ಟದ್ದು ಅಂತ ಜ್ಞಾಪಕ ಬೇರೆ ಬಂತು."

"ಆದ್ದರಿಂದಲೇ ನನಗೂ ಈ ನೀಲಿ ಸೂಟು ಹಾಕಿಕೊಂಡಾಗ, ಪ್ರಾಯ ಕಡಮೆ ಆದಹಾಗೆ ತೋರುತ್ತೆ! ಮದುವೆ ಮಂಟಪ, ಹೊಗೆ ಹೊಕ್ಕು ಕೆಂಚಗಾದ ನಿನ್ನ ಕಣ್ಣು, ಮೆರವಣಿಗೆ ದಿನ ನೀನು ತೂಕಡಿಸುತ್ತ ಕಾರಲ್ಲಿ ಕೂತಿದ್ದು, ಹೊಸ ಸಂಸಾರ, ಹೊಸ ಚಾಕರಿ, ಎಲ್ಲಾನೂ ನನ್ನ ಆನಂದಾನ ಉಕ್ಕಿಸುತ್ತೆ...."

"ಅಯ್ಯೋ! ಆ ಮದವೇನೋ? ಆ ಮೆರವಣಿಗೇನೋ? ಸಾಕು, ಸಾಕು! ನನ್ನ ಕಣ್ಣಿಗೆ ಸುಣ್ಣ ಬಳಿಯುವ ಮಾತಿದು; ಯಾಕೆ ಸುಮ್ಮನೆ ಆಡುತ್ತೀರಿ? ನನ್ನ ಕೋಪ ಕೆರಳಿಸಬೇಡಿ. ಆ ಸೂಟಿಗೆ ಅಂತಸ್ತು ಸಾಲದು. ಹಡಗು ನಡೆಸುವವರು ತೊಡುವ ಬಣ್ಣ, ಮೋಟಾರ್ ಡ್ರೈವರನಹಾಗೆ ಕಾಣುತ್ತೆ, ದೊಗಲು ದೊಗಲಾಗಿ ಹೊಲಿಗೆ ಅಂತ ನೀವು, ನಿಮ್ಮ ಭಾವ, ಮದುವೆ ದಿನ ರೇಗಿದ್ದು ರಂಪ ಎಬ್ಬಿಸಿದ್ದು ಎಲ್ಲಾನ್ನೂ ಯಾರೂ ಮರೆತಿಲ್ಲ...."

"ಒಳ್ಳೆ, ಆನೆ ಕಣೆ, ನೀನು...."

"ಆ?"

"ನಿನಗೆ ಆನೆಯಂಥ ಜ್ಞಾಪಕಶಕ್ತಿ ಇದೆ, ಅಂದೆ, ಅಷ್ಟೆ. ತನಗಾದ ಅವಮಾನವನ್ನ ಆನೆ ಎಂದಿಗೂ ಮರೆಯುವುದೇ ಇಲ್ಲವಂತೆ. ಅರವತ್ತು ವರ್ಷವಾಗಲಿ, ನೂರು ವರ್ಷವಾಗಲಿ, ಆ ಮಾವುತನನ್ನ ತಿವಿದೇ ತಿವಿಯುತ್ತೆ ಅಂತಾರೆ, ಗಜದ್ರುಗಳು."

"ಅಲ್ಲಾ! ನಿಮ್ಮ ಪರಮಾನಂದ ಶಿಷ್ಯ, ನಿಮ್ಮ ಭಾವ ತಾನೆ, ಚಿಕ್ಕ ಪೇಟೆಯಲ್ಲೆಲ್ಲ ಅಲೆದು ಆರಿಸಿದ್ದು ಈ ಬಟ್ಟೇನ...."

"ಆತನ ಮಾತು ಯಾಕೀಗ? ಆತ ಸಭ್ಯಾ, ಕಣೆ!"

"ಆಹ! ಸಭೆಗೆ ಬಂದಾಗಲಾನೆ ಸಭ್ಯತೆ ಗೊತ್ತಾಗೋದು? ತುಂಬಿದ ಸಭೆಯಲ್ಲಿ ತಾನೆ ಆತ ಜಗಳ ತೆಗೆದದ್ದು, ಮದುವೆಯಲ್ಲಿ?....ದೊಗಲಂತೆ, ದೊಗಲು! ನನ್ನ ಹಾಗೇನೆ ನನ್ನ ಸಂತಾನವೆಲ್ಲ ಬೆಳೆಯುತ್ತಾ ಬೆಳೆಯುತ್ತಾ ದಪ್ಪವಾಗುತ್ತಾರೆ....ಉಲ್ಲನ್ ಬಟ್ಟೆ, ನೀರು ಬಿದ್ದರೆ, ಸುಕ್ಕಿ ಹೋಗುತ್ತೆ.... ಕೊಂಚ ಧಾರಾಳವಾಗಿಯೇ ಇರಲಿ ಅಳತೆ ಅಂತ ನಿಮ್ಮ ತಂದೆಯವರೂ ಕೂಡ ಟೈಲರನ್ನ ಪೀಡಿಸಿದರಂತರಲ್ಲಾ, ನಲವತ್ತೈದು, ನಲವತ್ತೆಂಟು, ಅಂತ...."

"ಹಾಗೆ ಹೊಲಿಸಿದ್ದರಿಂದಲೇನೆ ಇಷ್ಟು ವರ್ಷಕ್ಕನುಕೂಲವಾದುದು...."

"ಆದರೂ, ನೀವು ಅದನ್ನ ಎಂದೋ ತುಂಬಿ, ಅದರಾಚೇನೂ ತುಳುಕಿ ಬಿಟ್ಟಿದೀರಿ....ಗುಂಡಿಗಳನ್ನು ನೋಡಿ, ಒದ್ದಾಡುತ್ತಾ ಇವೆ, ಉಸಿರು ಕಟ್ಟಿ ಕೊಂಡು...."

"ಕಡೆಗೆ, ಏನು ನಿನ್ನಾಜ್ಞೆ? ಹೇಳಿಬಿಡು, ಹೊತ್ತಾಯ್ತು! ಎಲ್ಲರೂ ಕಾದಿರುತ್ತಾರೆ....ಟ್ಯಾಕ್ಸಿ ಹಾರನ್ ಕೇಳಿಸುತ್ತಾ ಇಲ್ಲವೆ, ನಿನಗೆ?"

"ಆಜ್ಞೆ ಅನ್ನೋ ಮಾತು ನಿಮ್ಮ ಬಾಯಿಂದ ಬಂದಮೇಲೆ ನಾನಿ ನ್ನೇನೂ ಹೇಳೋದಿಲ್ಲ ನನ್ನ ಮಾತು ಸಾಕು. ಚಂಚೂನ ಕೇಳಿ!....ಸರಿಯೇ? ಅವಳಿಗಿಂತ ಇನ್ನೇನು? ಚಂಚೂ!....ಚಂಚೂ!....ಬಾ, ಇಲ್ಲಿ! ಈ ಅವತಾರಾನ ನೋಡು, ಕೊಂಚ...."

"ಬಂದೆ....!"

"ಅದಿರಲಿ! ಟ್ಯಾಕ್ಸಿ ಯಾಕಿವತ್ತು? ನಿಮ್ಮ ಜಾಗಕ್ಕೆ ಬರೋ ಹೊಸಬ ನಿಗೆ ಕಾರಿಲ್ಲವೇನು? ಬಂದು ಕೂರಿಸಿಕೊಂಡು ಹೋಗುವಷ್ಟು ಮರ್ಯಾದೆ ಇಲ್ಲವೆ ಅವನಿಗೆ? ಇನ್ನೂ ಅದೇ ದ್ವೇಷವನ್ನೇ ಸಾಧಿಸಬೇಕೆ? ನಿಮಗೆ ಯತ್ತೇ ಯಜ್ಞ ಕೊಟ್ಟಮೇಲೂ....?"

"ಹೋಗೆ! ಅವನು ಅಯೋಗ್ಯ, ನಾಲಾಯಕ್ಕು, ಅಂತ ನಾನೇ ಎರಡು ವರ್ಷದಿಂದ ಅವನಮೇಲೆ ರಿಪೋರ್ಟ್ ಬರೆಯುತ್ತಿರುವಾಗ, ಇವತ್ತು ಇಲ್ಲಿಗೆ ಯಾವ ಮೂತಿ ಹೊತ್ತುಕೊಂಡು ಬರ್‍ತಾನೆ? ಇಲ್ಲಿಗೂ ಬರೋದಿಲ್ಲ ಅವನು ಅಲ್ಲಿಗೂ ತಲೆಹಾಕೋದಿಲ್ಲ. ಮೀಸೆ ತಿರುವಿಕೊಂಡು, ಒಲೆ ಮುಂದೆ ಪೌರುಷ ತೋರಿಸುತ್ತಿರುತ್ತಾನೆ, ಅಷ್ಟೆ! ಅದಿರಲಿ, ಇನ್ನೇನು, ಆಯಿತಲ್ಲಾ ನನ್ನ ಆರ್ಡರು, ನನ್ನ ರಿಪೋರ್ಟೂ ಎಲ್ಲ ಆಟಾನೂ! ನನ್ನ ಪೆನ್ನಲ್ಲಿ ಸರ್ಕಾರಿ ಮಸಿ

ಬತ್ತೀರ ಹೋಯ್ತು.... ಈಗ, ನಿನ್ನ ಆರ್ಡರೇನು? ಅಷ್ಟೇನೂ ಹಿಂಸೆ ಇಲ್ಲ ಕಣೆ, ಈ ಸೂಟಿಂದ.... ಹೊರಡಲಿ? ಹೊತ್ತಾಯ್ತು!"

"ನನ್ನದೇನೂ ಅಭ್ಯಂತರವಿಲ್ಲ! ನಕ್ಕರೆ ಹರಿಯುತ್ತೆ, ಅಷ್ಟೆ! ಚಂಚೂನ ಕೇಳಿ.... ಚಂಚೂ! ಬಾ! ನೋಡು, ಈ ಹೊಟ್ಟೆ ಸಂಕಟಾನ! ಕಳುಹಿಸ ಬಹುದೇನೆ ನಾವು, ಇವರನ್ನ, ಈ ವೇಷ ತಗುಲಿಸಿ?"

"ಅಯ್ಯೋ! ನೀನು ಹೇಳೋದು ಸರಿ, ಅಕ್ಕ! ನಕ್ಕು ಪಕ್ಕೆ ಹಿಡಿದು ಕೊಂಡು ಚರಂಡಿಗೆ ಬೀಳುತ್ತಾರೆ, ದಾರಿ ಉದ್ದಕ್ಕೂ, ಮಕ್ಕಳು ಮರಿ ಕೂಡ! ನಿಮ್ಮ ಬಣ್ಣಕ್ಕೆ ಈ ನೀಲಿ ಸೂಟು ಒಪ್ಪುವುದೇ ಇಲ್ಲ!.... ಯಾರನ್ನೂ ಕೇಳೋ ದಿಲ್ಲ, ಮಾಡುವುದಿಲ್ಲ, ಹೊತ್ತಿಗೆ ಮುಂಚೆ ಅದರೊಳಗೆ ಸೇರಿಕೊಂಡು ನಿಂತು ಬಿಡುತ್ತೀರಿ.... ಆ ಬೂದಿ ಬಣ್ಣದ್ದು, ಡಾನಿಗಲ್ಲೇ ಸರಿ, ಇವತ್ತಿನ ಸಮಾ ರಂಭಕ್ಕೆ! ಅಲ್ಲ, ಸಮಾ.... ಸಮಾಪ್ತಿಗೆ! ಎಲ್ಲಕ್ಕೂ, ಅದು! ನಾನು ತೆಗೆದು ಕೊಂಡು ಬರ್ತೀನೆ...."

"ಅವಳು ಅದನ್ನ ತರಲಿ! ನೀವು ಅಷ್ಟರೊಳಗೆ ಇದರೊಳಗಿಂದ ಹೊರಬನ್ನಿ!"

"ಹುಂ! ಹೀಗಾಯಿತೋ ಈ ಸೂಟಿನ ಅವಸ್ಥೆ! ಇರಲಿ, ಕಳಚು ತ್ತೀನೆ.... ನೀನು ಯಾವನಾದರೂ ಒಬ್ಬ ಜವಾನನ್ನ ಕರೆದು, ಆ ಹಾಳಾದವ ನಿಗೆ ಹಾರನೊತ್ತಬೇಡ, ಅಂತ ಹೇಳಿಕಳುಹಿಸಬಾರದೆ, ಸರಸೂ."

"ಜವಾನ? ನಿನ್ನೇನೆ ಜಾರಿಕೊಂಡರಲ್ಲಾ, ನಿಮ್ಮ ಜವಾನರೆಲ್ಲ! ಒಬ್ಬ ರನ್ನೂ ಬಿಡದೆ ಕರೆಯಿಸಿಕೊಂಡು ಬಿಟ್ಟ, ಆ ಕಾಕೋಟಿಕ! ಅಬ್ದುಲ್ಲಾ, ಪಾಪ, ಅಳುತ್ತಾ ಹೋದ, ಅಂದ್ರೆ; 'ನೀವು ನಮಗೆ ಎಷ್ಟೋ ಹಿಂಸೆ ಕೊಟ್ಟಿರಿ; ಇಷ್ಟು ಅನ್ನಾನ ಒಂದು ದಿನವೂ ಕೊಡಲಿಲ್ಲ.... ಆದರೂ, ಆಗಾಗ, ಒಂದು ಒಳ್ಳೇ ಮಾತನ್ನಾದರೂ ಆಡ್ತಿದ್ದಿರಿ! ಆ ಹೊಸ ಅಮ್ಮಾವರು ಸದಾ ಸಾಹೇಬರ ಜೊತೆಲೇ ಇರುತ್ತಾರಂತೆ. ಸಾಹೇಬರ ಸಮುಸಮು ನಮ್ಮನ್ನ ಬೈತಾರಂತೆ.... ಏನೋ ತಾಯಿ, ಬಿಡ್ತು, ಋಣಾನುಬಂಧ' ಅಂತ ಹೋದ.... ಇಲ್ನೋಡಿ! ಟ್ಯಾಕ್ಸಿಯವನಿಗೆ ನೀವು ಬಾಡಿಗೆ ಕಾಸನ್ನ ಕೊಡಗಿಡಬೇಡಿ, ಮಿಾಟಿಂಗ್ ಏರ್ಪಾಟು ಮಾಡಿದವರೇ ಬಿಚ್ಚಲಿ! ಸಂಬಳ ಇವತ್ತಿನಿಂದ ಇನ್ನೂರೈವತ್ತು, ಜ್ಞಾಪಕವಿರಲಿ. ನೀವು ಮರೆತರೂ, ನಿಮ್ಮ ಆನೆ ಮರೆಯುವುದಿಲ್ಲ...."

"ಸುಮ್ಮನೆ ತಮಾಷೆಗೆ ಹಾಗಂದರೆ, ನೀನು ಅದನ್ನ...ಹೀಗೆ...ಸರಸೂ..."

"ಡಾನಿಗಲ್ ಸೂಟು ಕೊಂಚ ಹರಿದಿದೆ! ತಾಳಿ! ಎರಡು ಹೊಲಿಗೆ ಹಾಕಿ ಬಿಡ್ತೀನೆ."

"ಚಂಚೂ! ಅಷ್ಟಕ್ಕೆಲ್ಲ ಸಮಯ ಇಲ್ಲ; ನಾನು ಹೊರಡಬೇಕು. ಆಗಲೇ ಆರೂ ಐದು! ಆರಕ್ಕೇನೇ ಪ್ರಾರಂಭ! ಕೊಡಿಲ್ಲಿ."

"ಇಲ್ಲಿ ಕೇಳೀಂದ್ರೆ! ಹಸೆಮೇಲೆ ಕೂಡೋರು ನೀವೇ ಆದ್ದರಿಂದ, ಒಂದೆರಡು ನಿಮಿಷ ತಡವಾದರೂ ಚಿಂತೆ ಇಲ್ಲ. ಆ ಹೆಡ್‌ಗುಮಾಸ್ತೆ ತಳಮಳಿಸಲಿ ಕೊಂಚ....ಯಾಕೊ, ಏನೊ, ಸರಿಯಾಗಿ ಕರೆದೆವೋ ಇಲ್ಲವೊ, ಏನು ಅಪಚಾರವಾಯಿತೋ, ಮತ್ತೊಂದು ಬಾರಿ ನೆನಪು ಕೊಡಬೇಕಾಯಿತೋ ಏನೋ ಸಾಹೇಬರಿಗೆ, ಅಂತ ಅವನ ಮನ ತುಸ ಪುಕ ಪುಕ ಅನ್ನಲಿ, ಸುಮ್ಮನಿರಿ....ಹೊತ್ತು ಮಿೀರಿ ಹೋಗುವುದೇ ಗಂಭೀರ, ಅಂತ ಎಷ್ಟು ಸಲ ಹೇಳಿದೀನಿ ನಿಮಗೆ....ತಡವಾದರೆ ಆಗಲಿ....ಚಂಚೂ, ನಿಧಾನವಾಗಿ ಹೊಲಿಯೆ!"

"ಛೆ! ಛೆ! ಪಾಪ! ಆಮೇಲೆ, ನಾನು ಬರುವುದೇ ಇಲ್ಲ, ಅಂತ ಹೆದರಿಬಿಟ್ಟಾರು! ಯಾಕಿನ್ನು ಇವರ ಬಾಯಲ್ಲೆಲ್ಲ ಅನ್ಯಾಯವಾಗಿ ಹೊಗಳಿಸಿಕೊಳ್ಳಬೇಕು ಅಂತ ಆಸಾಮಿ ಸಂಕೋಚಪಟ್ಟು ಮನೆಯಲ್ಲೇ ಉಳಿದುಬಿಟ್ಟ ಅಂತ ತಿಳಿದುಕೊಂಡರೆ...."

"ಅಯ್ಯೋ! ಅಯ್ಯೋ! ಕೇಳಿದೆಯೇನೆ, ಚಂಚೂ! ಯಾರಿಗೂ ಗೊತ್ತಿಲ್ಲವೋ ನಿಮ್ಮ ಆಫೀಸ್ ಗುಮಾಸ್ತೆಯರ ಯೋಗ್ಯತೆ?....ಕಿರುನಾಲಗೆಯಲ್ಲಿ ಕಲ್ಮಷ; ಹಿರಿನಾಲಗೆಯಲ್ಲಿ ಕಲ್ಸಕ್ಕರೆ!

"ಓ! ಜನ ಮನಸ್ಸಿನಲ್ಲಿದ್ದದ್ದನ್ನೆಲ್ಲ ಇದ್ದಹಾಗೆ ಆಡುವುದಕ್ಕೆ ಮೊದಲು ಮಾಡಿದರೆ, ಮೂರು ದಿನದಲ್ಲಿ ಮಾರಾಮಾರಿ ಎದ್ದು ಮುಖ ಮೂತಿ ಮನೆ ಮಠ ಮುರಿದುಕೊಂಡು ನಿರ್ನಾಮವಾಗುತ್ತಾರೆ, ಅಷ್ಟೆ!....ಆಯಿತೆ, ಚಂಚು?

"ಆ ಕಪಟ ಗೋಷ್ಠಿ ಮಾತು ಕೇಳೋಕೆ ಅಷ್ಟೊಂದು ಅವಸರವಾದರೆ, ಕೊಡಿ, ಸೂಟ್ನ! ಹರಕು ಬಿರುಕು ಇದ್ದಲ್ಲೇ ಇರಲಿ!"

"ಅಕ್ಕಾ! ಹೇಗೂ ಎಕ್ಸ್‌ಟೆನ್‌ಷನ್ ಕೊಡುವಹಾಗಿಲ್ಲ ಅಂತ ಮೂರು ವರ್ಷದಿಂದ ಭಾವನವರಿಗೆ ಹೊಸ ಅಂಗಿ ಹೊಲಿಸುವುದನ್ನೇ ನಿಲ್ಲಿಸಿಬಿಟ್ಟದ್ದೆ.... ಅದಕ್ಕೇ ಈ ಗೋಳು...."

"ಏನು ಮಹಾ, ಪ್ರಮಾದ, ಅದರಿಂದ? ರೂಪಾಯಿ ಉಳಿಯಿತು.... ಇಡು ಅದನ್ನ ಆ ಕುರ್ಚಿ ಬೆನ್ನ ಮೇಲೆ. ಎಲ್ಲಿ ಹೆಚ್ಚಾಗಿ ಬಿಟ್ಟುಕೊಂಡಿರುವುದು?....ನಡು ಬೆನ್ನಿನ ಹೊಲಿಗೆ ತಾನೆ?....ಇಲ್ಲಿ ಕೇಳಿ....ಗೋಡೆ ಮಗ್ಗುಲಿಗೆ ನಿಂತುಬಿಡಿ, ಉದ್ದಕ್ಕೂ ಉದ್ದವಾಗಿ....ಅಥವಾ, ಕುರ್ಚಿಗೆ ಒರಗಿಕೊಂಡುಬಿಡಿ, ಹೋಗುತ್ತಲೂ....ಕಾಣಿಸುವುದಿಲ್ಲ....ಅಲ್ಲೆಲ್ಲಾದರೂ, ನಿಮ್ಮ ಬಂಗಾರದ ಭಾವ ಬಂದಿದ್ದರೆ, ಅವರ ಮುಖ ನೋಡಿದ ತಕ್ಷಣ ಎದ್ದು ಹರಕು ತೋರಿಸಬೇಡಿ ಎಲ್ಲರಿಗೂನು! ಗಂಭೀರವಾಗಿರಿ...."

"ಭಾವಾ! ಭಾಷಣ ಮಾಡುವಾಗ, ಮನಸ್ಸು ಗಟ್ಟಿಯಾಗಿರಲಿ....ಬಿಟ್ಟುಬರುವಾಗ ಏನೋ ಒಂದುತರಹ ಆಗುತ್ತೆ ಆದರೂ, ಕುಸಿದು, ಕಣ್ಣೀರಿಟ್ಟು...."

"ಚಂಚೂ ಮಾತು ಕೇಳಿಕೊಂಡು, ಒಳ್ಳೆ ಕಲ್ಲು ಗುಂಡಿನ ಹಾಗೆ ಕುಕ್ಕರಿಸಬೇಡಿ....ಬಿಡಿ ನಾಲ್ಕು ಬಾಣಾನ, ಬಿಸಿ ಬಿಸಿಯಾಗಿ, ನಿಮಗೆ ಅನ್ಯಾಯ ಮಾಡಿದವರಮೇಲೆ...."

"ಏನೆ ಇದು? ಇಷ್ಟು ವರ್ಷವೂ ಈ ಹಾಳು ಚಾಡಿ ಚೇಳುಗಳ ಕುಟುಕನ್ನೆಲ್ಲ ಸಹಿಸಿದ್ದು ಪೆನ್‌ಷನ್ ಆಸೆಗೆ; ಅದಕ್ಕೆ ಮೋಸವಿಲ್ಲ ಅಂದಮೇಲೆ ಈಗ, ತೆಪ್ಪಗಿಳಿದು ಬರೋದೇ ಭೂಷಣ, ಬುದ್ಧಿವಂತಿಕೆ...."

"ಭಾವ ಹೇಳೋದು, ಸರಿ, ಅಕ್ಕಾ! ಹಳಸಿದ್ದನ್ನೆಲ್ಲಾ ಮತ್ತೆ ಬಳಸಿಕೊಳ್ಳಬಾರದು....ಸಗಣಿ ಮಾರುವವನೊಂದಿಗೆ ಗುದ್ದಾಡುತ್ತಾರೆಯೇ ಯಾರಾದರೂ? ತೂಕವಾಗಿ ಎದ್ದು ನಿಂತು, ಹತ್ತು ಮುತ್ತು ಉದುರಿಸಿಬಿಟ್ಟು, ಹಿಂದಕ್ಕೆ ತಿರುಗಿ ನೋಡದೆ, ಈಚೆಗೆ ಇಳಿದುಬಂದು ಬಿಡಬೇಕು."

"ಕಡೆಗೆ, ಒಂದು ಸಲ, ಇನ್ನೇನು ಭಾಷಣ ಮುಗಿಯಿತು, ಅನ್ನುವಾಗ, ಕಿಸೆಯಿಂದ ಕರ್ಚೀಫ್ ತೆಗೆಯೋಣ ಹೊರಕ್ಕೆ, ಅಂತ ಮಾಡಿಕೊಂಡಿದೇನೆ ಮನಸ್ಸನ್ನ...."

"ಅದೇನೇನು ನಾಟಕ ಆಡುತ್ತೀರೋ, ಆಡಿ ಬನ್ನಿ! ವೇಷ ತೊಟ್ಟಾಯಿತೊ?"

"ವೇಷಾನೂ ಮುಗಿಯಿತು! ಇಕೊ! ಸೂತ್ರಧಾರನೂ ಬಂದ.... ಗೋವಿಂದು ತಾನೆ ಅದು, ಟಾಕ್ಸಿ ಹತ್ರ? ಇನ್ನು ನಾನು ಹೊರಡುತ್ತೇನೆ.... ಆಯಿತಲ್ಲ, ಇವತ್ತಿಗೆ ಈ ಗಾಣ!"

"ಹೋಗಿಬನ್ನಿ ! ಅಂತು, ಇಷ್ಟಾದರೂ ಮಾನವಾಗಿ ಮೂವತ್ತು ವರ್ಷ ಸರ್ವಿಸು ಮುಗಿಸಿದಿರಲ್ಲಾ, ನಾನು ಬೇರೆ ನಂಬಿರಲಿಲ್ಲ!....ಬೇಗ ಬನ್ನಿ !.... ದೇವಸ್ಥಾನಕ್ಕೆ ಹೋಗುತ್ತೇವೆ, ನಾವು ; ನೀವೂ ಜೊತೆಗೆ ಬನ್ನಿ....ಅರ್ಚನೆ ಇದೆ...."

"ಹುಂ ! ಬರ್ತೀನೆ ಇನ್ನು !....ಬರ್ತೀನೆ, ಚಂಚೂ...."

* * *

ಕಾರ್ ಹತ್ತಿರ ಗೋವಿಂದು ಹಲ್ಲು ಕಿರಿಯುತ್ತ, ಬುರುಡೆ ಬಲಭಾಗವನ್ನು ಕೆರೆಯುತ್ತ, ನಿಂತಿದ್ದ....ಅವನ ಕಿರಿತ ಕೆರೆತಗಳು ಮಹಾಬಲರಾಯರಿಗೆ ಬಹಳ ಹಿತವೆನಿಸಿದುವು. ಹಿಂದಿನ ದಿನ ಸಂಜೆ, ತನ್ನ ಉನ್ನತಾಧಿಕಾರದ ಸಮಸ್ತ ಆಗುಹೋಗು ಬೀಗ-ಸೋಗುಗಳನ್ನೂ ಆ ಚಾಡಿಕೋರನಿಗೆ ವಹಿಸಿಕೊಟ್ಟು ಮೆಟ್ಟಲಿಳಿದು ಬಂದಿದ್ದರೂ, ವರದಾಭಯಶಕ್ತಿಯನ್ನು ಕಳೆದುಕೊಂಡಿದ್ದರೂ, ಆ ಹತ್ತೊಂಬತ್ತು ರೂಪಾಯಿ ಚಾಕರ, ಇನ್ನೂ ಅವನ ಎಂದಿನ ಮುಖಚಿತ್ರ ವನ್ನೇ ತನ್ನೆದುರು ಪ್ರದರ್ಶಿಸುತ್ತಿದ್ದನಲ್ಲಾ! ತನ್ನ ಅಧಿಕಾರ ಹೃದಯದ ಬಡಿತ ನಿಂತಮೇಲೂ ಇಷ್ಟುಹೊತ್ತು ಅವನ ಮೈಗೆ ಕಾವು ಅಂಟಿಕೊಂಡಿದೆ ಯಲ್ಲಾ....ಹಾಗಂದಮೇಲೆ, ಈಗ, ಆಫೀಸಿನಲ್ಲಿ, ತನಗಾಗಿ ಏರ್ಪಾಟಾಗಿರುವ ಬೀಳ್ಕೊಡುವ ಸಮಾರಂಭದಲ್ಲಿ ತಾನೆಣಿಸಿದಷ್ಟು ಕುತಂತ್ರ ಕಾಪಟ್ಯಗಳಿರ ಲಾರವು ; ಎಲ್ಲರೂ ಇನ್ನೂ ತನ್ನ ನಿರ್ಗಮನಕ್ಕಾಗಿ ನಿಜಕ್ಕೂ ತಪತಪಿಸು ತ್ತಿರುವರು, ಎಂದು ಅವರು ಸಮಾಧಾನ ಹೊಂದಿದರು.

ಗೋವಿಂದು ಕಾರಿನ ಹಿಂಬಾಗಿಲ ತಿರುಪನ್ನು ತಿರುಚಿ ತೆರೆದುಕೊಟ್ಟ.... ಮಹಾಬಲರಾಯರು ಬಲಗಾಲು ಚಾಚಿ ಬಾಡಿಗೆ ವಾಹನವನ್ನು ಹತ್ತಿದರು ; ಸ್ಪ್ರಿಂಗುಗಳು ಹಿಂಭಾರ ಹೆಚ್ಚೆಂದು ಚೀರಿದುವು. ಮುಂಬಾಗಿಲನ್ನು ತೆರೆದು, ಸಾರಥಿಯ ಎಡ ಮಗ್ಗುಲಲ್ಲಿ ಗೋವಿಂದು ಸೊಂಟ ಬಗ್ಗಿಸಿ ತಲೆ ತಗ್ಗಿಸಿ ಕುಳಿತ. ಗೊಣಗುತ್ತ ಶಪಿಸುತ್ತ ಕಾರು....ಹೊರಟಿತು!....ರಾಯರು ಗೋವಿಂದುವಿನ ಕೊಳೆ ತುಂಬಿದ ಹೆಕ್ಕತ್ತನ್ನು ನೋಡಿದರು. ಮುಂದಾಸನದಲ್ಲಿ ಮಂಡಿಸಿ ಸಾಹೇಬರಿಗೆ ಬೆನ್ನು ತೋರಿಸುತ್ತಿದ್ದದ್ದರಲ್ಲಿ ಗೋವಿಂದುವಿನ ಅಂತರಂಗ ಅಸಮ್ಮತಿಯಿಂದ ತುಂಬಿತ್ತೆಂಬುದನ್ನು ಆ ಹೆಕ್ಕತ್ತಿನ ನುಲಿದಾಟವೇ ತೋರಿಸು ತ್ತಿತ್ತು....ಹಾಗೆಯೇ, ರಾಯರ ವಿಚಾರವಾಹಿನಿ ತಮ್ಮ ಜೀವನದ ಇತಿಹಾಸದ

ಕಡೆಗೂ, ಇಂಡಿಯಾ ದೇಶದ ವೇದಾಂತದ ಕಡೆಗೂ, ಸರಸು ಚಂಚುಗಳ ಕಡೆಗೂ....ಇದ್ದಕ್ಕಿದ್ದಂತೆ, ಗೋವಿಂದು ಆ ವಾಹಿನಿಗೆ ಅಡ್ಡ ಬಂದ!

"ಅಪ್ಪಣೆಯಾದರೆ, ಒಂದು ಮಾತಿದೆ" ಎಂದು ಸರಕ್ಕನೆ ಹಿಂತಿರುಗಿದ.

"ಏನೋ?....ಏನದು?" ಎಂದರು ಮಹಾಬಲರಾಯರು.

ರಾಯರು ಅನುಭವಸ್ಥರು! ಅವರಿಗೆ ತಿಳಿಯದೆ, ಯಾವ ಕಾರ್ಯಲಾಭಕ್ಕಾಗಿ ಗೋವಿಂದು–ಗ್ರೇಡಿನ ಜನ ಈ ತೆರನ ಪೀಠಿಕೆಹಾಕಿ ಮಾತಿಗೆ ಮೊದಲು ಮಾಡುವರು ಎಂಬುದು? ಎಂಥದೊ ಒಂದು ನೌಕರಿ, ಒಂದು ಬಡ್ತಿ, ಒಂದು ವರ್ಗ, ಒಂದು ಹಿಡಿ ಅಲೊಯನ್ಸ್, ಒಂದು ಮಿಡಿ ಭತ್ಯ, ಒಂದು ಪುಡಿ ಶಿಪಾರ್ಸು ಪತ್ರ!....“ಮಂಕ! ನಿನ್ನೆ ಬೆಳಗ್ಗೆ ಬಾಯಿ ಬಿಡಬಾರದಾಗಿತ್ತೆ? ಕಲ್ಪವೃಕ್ಷ ಒಣಗಿದಮೇಲೆ, ಹೀಚೆಲ್ಲ ಹಿಂಗಿದಮೇಲೆ ಕಲ್ಲು ಬೀರುತ್ತಾ ನಲ್ಲಾ!...." ಮೂವತ್ತು ವರ್ಷದಿಂದ, ತಮ್ಮ ಅಧಿಕಾರವಲಯದ ವ್ಯಾಸಕ್ಕನುಗುಣವಾದಷ್ಟು ಸಂಖ್ಯೆಯಲ್ಲಿ, ಅಪೇಕ್ಷಕರು ಬಂದು, ನಿಂತು, ಬಗ್ಗಿ, ಕಾಡಿ.... ಎತ್ತ ತಿರುಗಿದರೂ, ಚಾಚಿದ ಕೈ, ತೂಗುವ ಕಿವಿ, ಊರಿದ ಮಂಡಿ, ಬಾಗಿದ ಸೊಂಟ, ಬಾಡಿದ ಮೀಸೆ!....

"ಏನೋ? ಏನದು?"

"ಕೋಪ ಮಾಡಿಕೊಳ್ಳಬೇಡಿ! ತಮ್ಮನ್ನ ಕೊಂಚ ತಡವಾಗಿ ಕರೆದು ತರೋದಕ್ಕೇನೆ ನನ್ನನ್ನ ಕಳುಹಿಸಿದ್ದು, ನಾರಣಪ್ಪನವರು! ಇಷ್ಟು ಬೇಗ ಓಡಿಸಬೇಡಿ ಈ ಕಾರ್‍ನ! ಆ ರೇಷನ್ ಆಫೀಸಿನವರು ತುಂಬಾ ಕಿರುಕುಳ ಕೊಟ್ಟರು, ತಮ್ಮ ಹೆಸರು ಹೇಳುತ್ತಲೂ! ಆದ್ದರಿಂದ ನಾರಣಪ್ಪನವರು ಅಕ್ಕಪಕ್ಕದ ಮನೇಲೆಲ್ಲಾ ಸಾಲ ತಂದು ತಾವೇ ಮಾಡುತ್ತಾ ಇದಾರೆ ಉಪಾಹಾರಾನ, ತಮ್ಮ ಮನೇಲೇ....ಪೂರಾ ಕೆಟ್ಟ ಜನ, ಸ್ವಾಮಿ! ಎಲ್ಲರೂನೂ. ಏನೇನೋ ಅವಾಂತರ ಆಗಿ ಹೋಗಿದೆ....ತಮ್ಮ ಕಿವಿಗೆ ಸೋಕಿಸುವ ಸಮಾಚಾರ ಅಲ್ಲ, ಅನ್ನಿ! ತಾವು ಕೊಂಚ ಗಾಳಿ ಕುಡಿದುಕೊಂಡು, ಅರ್ಧ ಮುಕ್ಕಾಲು ಗಂಟೆ ಕಳೆದು, ಏಳು, ಏಳೂವರೆ ಸಮಯದಲ್ಲಿ...."

"ಹುಂ" ಎಂದರು ಸಾಹೇಬರು ದೀರ್ಘವಾಗಿ, ಹೊಟ್ಟೆಯಮೇಲೆ ಅಂಗೈ ಆಡಿಸುತ್ತ "ಹೊಟ್ಟೆ ಸಂಕಟಾನ ಅದುಮಿಕೊಳ್ಳಬೇಕು, ತಾವು! ಎಂಥೆಂಥ ಕಷ್ಟಗಳೇ ಬರಲಿ, ನಡೆಸಿಯೇ ಬಿಡ್ತೇನೆ," ಅಂತ ನಾರಣಪ್ಪನವರು ತಮ್ಮ

ಭಾವನವರೆದುರು ಭುಜ ತಟ್ಟಿದರು, ಬೆಳಗ್ಗೆ....ತಮ್ಮಂಥ ರತ್ನ ಇದ್ದ ಕಡೆ ಕೆಂಡ ಬಂದು ಕೂತಿದೆ; ಆದರೆ, ಕೆಂಡಕ್ಕೆ ಇರುವೆ ಮುತ್ತುವುದುಂಟೆ?" ಎಂದು ಹೇಳುತ್ತ, ಗೋವಿಂದು ಥಟಕ್ಕನೆ, ಸಾರಥಿಯ ಮುಖ ನೋಡಿದ! ತನ್ನ ಮಾತಿನೊಳಗಣ ಒಡಕು ಹೊಗಳಿಕೆ ಡ್ರೈವರನಿಗೆ ಹೇಗೋ ಗೋಚರವಾಯಿತಲ್ಲಾ ಎಂದು ಗೋವಿಂದು ಅಚ್ಚರಿಗೊಂಡ. ಡ್ರೈವರನೂ ತನ್ನಂತೆಯೇ ಹಣವಂತರನ್ನು ಹೊಗಳಿ ಹೊಟ್ಟೆಗೆ ಗಂಜಿ ಹುಯ್ದುಕೊಳ್ಳುವವನು, ಆದ್ದರಿಂದಲೇ ಅವನು ಎಡ ಹುಬ್ಬನ್ನು ಹಾರಿಸಿ ತನ್ನ ಚಮತ್ಕಾರದ ಮಾತಿಗೆ ಭಲೆ ಎಂದ—ಎಂದು ಗೋವಿಂದು ಅರಿತುಕೊಂಡ. ಇಬ್ಬರೂ ಶ್ರೀಮಂತರ ನೆರಳಿನಲ್ಲಿ ಕುಳಿತು ಬಾಲವಾಡಿಸುವ ನರಕುನ್ನಿಗಳು!

ಮಹಾಬಲರಾಯರಿಗೆ ಉಭಯ ಸಂಕಟ! ಅವರು ಕಾಲ ಕೆಳಗಿನ ಹಲಗೆಯನ್ನು ಥೊಪ್ಪನೆ ತುಳಿದು 'ಥತ್' ಎಂದರು. "ಇನ್ನು ಮನೆಗಂತೂ ಹಿಂತಿರುಗುವ ಹಾಗಿಲ್ಲ; ಸರಸು ನನ್ನನ್ನ ಹೇಡಿ ಅಂತಾಳೆ; ಹೊರಟ ಕೆಲಸ ಮುಗಿಸದೆ ಹಿಂತಿರುಗಬಾರದು, ಅಂತಾಳೆ; ಅದಕ್ಕೂ ಸೇರಿಸಿ ನಾಲ್ಕು ಗುದ್ದು ಮಾತಾಡುವುದು ಬಿಟ್ಟು ಓಡಿ ಮನೆ ಸೇರಿಬಿಡೋದೆ, ಅಂತಾಳೆ; ಚುಂಚು, ನಕ್ಕೇ ಬಿಡುತ್ತಾಳೆ....ಆ ಪೋಲಿ ದನಗಳಿಂದ ಈ ಮೀಟಿಂಗನ್ನು ಆಗಮಾಡಿಸಿರುವ ಭಾವನ ಗತಿ ಏನು?....ಬೀಳ್ಕೊಡುವ ಸಮಾರಂಭ, ದುರಂತದಲ್ಲಿ ಕೊನೆಗಂಡರೆ, ನನ್ನಿಂದ ಚಾಕರಿ ಗಿಟ್ಟಿಸಿಕೊಂಡ ಚಾಣಕ್ಯಕೋರನಿಗೆ ಚತುರ್ಭುಜ ಬೆಳೆಯುತ್ತದೆ! 'ಏನ್ರಿ! ನಿಮ್ಮ ಮಹಾಬಲರಾಯರು ಈ ಸೀಟು ಬಿಟ್ಟಾಗ, ಒಂದು ಬೆಕ್ಕಿನಮರಿ ಕೂಡ ಮ್ಯಾವ್ ಅನ್ನಲಿಲ್ಲವಂತಲ್ಲಾ! ಒಂದು ನರಪ್ರಾಣಿ ಮೂಗಲ್ಲಿ ಕೂಡ ಒಂದು ಬಿಂದು ನೀರು ಸೋರಲಿಲ್ಲವಂತಲ್ಲಾ, ಎಂದು ಅವನು ನಾಳೆ ಅಶೇಷ ಗುಮಾಸ್ತೆಯರೆದುರು ತೊಡೆ ತಟ್ಟಿಕೊಂಡು ಗಹಗಹಿಸುತ್ತಾನೆ...." ಕಡೆಗೆ, ಮನೆ ದಾರಿ ಹಿಡಿಯದೆ, ಎಲ್ಲೆಲ್ಲೋ ಕಾರನ್ನೋಡಿಸಿ ಹೊತ್ತು ಮುಳುಗಿಸಿ, ಮೀಟಿಂಗಿನಲ್ಲಿ ಹಾಜರಾಗುವುದೇ ಲೇಸೆಂದು ಮಹಾಬಲರಾಯರು ನಿಶ್ಚಯಿಸಿದರು.

# ಆ ಫೀ ಸ್

ಏಳೂವರೆಗೆ ಮಹಾಬಲರಾಯರು ಕಾರಿಂದಿಳಿದು, ಹಲವು ಗುಮಾಸ್ತೆಯರಿಂದ ಸುಸ್ವಾಗತರಾಗಿ, ಸಭಾಂಕಣಕ್ಕೆಂದು ಸಿದ್ಧಪಡಿಸಿದ್ದ ಹೆಡ್ ಗುಮಾಸ್ತೆಯ ರೂಮಿನಲ್ಲಿ, ತಾವು ನಿನ್ನೆಯವರೆಗೂ ದಿನಕ್ಕೆಂಟು ಗಂಟೆಗಳ ಕಾಲ ಕಾವು ಕೊಡುತ್ತಿದ್ದ ದಿಂಬಿನ ಕುರ್ಚಿಯಲ್ಲಿ, ನೆಟ್ಟನೆಯ ಬೆನ್ನಿಗರಾಗಿ ಕುಳಿತರು. ಭಾವನ ಪ್ರಭಾವದಿಂದಲೂ, ಅವನೇ ಖುದ್ದಾಗಿ ಅಲ್ಲಿಗೆ ಬಂದಿದ್ದು ಮೆಹನತ್ತು ಮಾಡುತ್ತಿದ್ದದ್ದರಿಂದಲೂ, ಕಾರ್ಯಕ್ರಮ ಹೆಚ್ಚು ಲೋಪದೋಷಗಳಿಲ್ಲದೆ ನೆರವೇರುವುದೆಂದು ಅವರು ನಿರೀಕ್ಷಿಸಿದರು. ಭಾವ ಅಲ್ಲೇ ಛುಗ್ ಎಂದು ಅತ್ತಲಾಗೂ, ಛುಗ್ ಎಂದು ಇತ್ತಲಾಗೂ ಓಡಾಡುತ್ತಾ, ಅವನ ಹಿಡಿತಕ್ಕೆ ಸಿಕ್ಕಿದ ಐದಾರು ನೌಕರರನ್ನ ಗದರಿಸಿ ಶೇಖರಿಸಿ ಕೂಡಿಸಿದ! ಅವರೆಲ್ಲರೂ ಸೇರಿದುದರ ಫಲವಾಗಿ, ನೆಲಕ್ಕೆ ಜಮಖಾನೆ ಹಾಸಲಾಯಿತು; ಗೋಡೆ ತೂತುಗಳಲ್ಲಿ ಊದುಬತ್ತಿಗಳನ್ನು ಹಚ್ಚಿಡಲಾಯಿತು; ಕಡೆಗೆ ಅವರೇ ಸಭಿಕ ಮಹಾಶಯರಾಗಿ ಅಲ್ಲಲ್ಲಿ ಕುಳಿತುಕೊಂಡರು. ಎರಡೆರಡು ದೊನ್ನೆಗಳನ್ನು ಹೊರ ತಂದು ನಾರಣಪ್ಪನವರು ಎಲ್ಲರ ಮುಂದೂ ಇಟ್ಟರು. ಮಹಾಬಲರಾಯರೆದುರು ಸಾಲದ ಎರಡು ಬೆಳ್ಳಿ ತಟ್ಟೆಗಳೂ ಒಂದು ಬಟ್ಟಲೂ ಕಂಗೊಳಿಸಿದುವು. ಒಂದರಲ್ಲಿ ಉಪ್ಪಿಟ್ಟು; ಪದಾರ್ಥ ಉಳಿತಾಯಕ್ಕೆ ಹೆಚ್ಚು ಉಪ್ಪಿನ ಉಪಾಯವನ್ನೇ ಶರಣುಹೋಗಿದ್ದರು. ಮತ್ತೊಂದರಲ್ಲಿ, ದನಸ್ಪತಿಯಲ್ಲಿ ಕರಿದ ಹೀರೇಕಾಯಿ ಬೋಂಡ, ಮೂರು; ನಿಂಬೆಹಣ್ಣಿನ ಪಾನಕಕ್ಕೆ ಸಕ್ಕರೆ ತೀರ ಕಡಮೆ; ನಿಂಬೆ ಹಣ್ಣಿನ ಸಿಪ್ಪೆಯನ್ನು ಕೂಡ ಬಲವಾಗಿ ಹಿಂಡಿದ್ದರಿಂದ, ನಾಲಗೆಯಲ್ಲಿ ನಿಂತದ್ದು ಅದರ ಕಹಿ, ಒಗರು!

"ಅನಂತರ, ಮಯೂರ ಕಂಠದ ಮಹಾಗಮಕಿಯೊಬ್ಬ ಒಂದು ಪದ್ಯರತ್ನಮಾಲೆಯನ್ನು ಹಾಳು ಹಾಡಿನಪೆಟ್ಟಿಗೆಯ ತಿದಿ ಒತ್ತುತ್ತ, ಹೇಳತೊಡಗಿದ. ಅದಕ್ಕೆ ಮಹಾಬಲಪದ್ಯಮಾಲಿ ಎಂದು ಆತ ಹೆಸರಿಟ್ಟಿದ್ದರೂ ಕೂಡ, ರಾಯರಿಗೆ ಅದರ ಒಳಮರ್ಮ ತಿಳಿದಿತ್ತು. ಅದೇ ಪದ್ಯಮಾಲೆಯನ್ನು ತಮ್ಮ ಅಧಿಕಾರಾವಧಿಯಲ್ಲಿ ಅವರು ದೇಶದ ಹಲವಾರು ಊರುಗಳಲ್ಲಿ ಕೇಳಿದ್ದರು. ಅನಿಷ್ಟಪಕ್ಷ, ನೂರಿನ್ನೂರು ಸಲವಾದರೂ ಅದನ್ನು ಬೇರೆ ಬೇರೆ ಮಹನೀಯರು

ಗಳಿಗನ್ವಯಿಸಿ ರಾಯರ ಅಧ್ಯಕ್ಷತೆಯಲ್ಲೇ ಆಯಾ ಊರಿನ ಹಾಡಿನ ಮೇಷ್ಟರು ಗಳು ಆಗಲೇ ಹಾಡಿದ್ದರು. ಅದೊಂದು ಸರ್ವನಾಮ ಕವನ, ಯಾರ ನಾಮಕ್ಕೆ ಬೇಕಾದರೂ ಅದನ್ನು ಸುಲಭವಾಗಿ ಅಳವಡಿಸಿಕೊಳ್ಳಬಹುದಾಗಿತ್ತು. ಬೀಳ್ಕೊಡಬೇಕಾದ ಅಧಿಕಾರಿಯ ಹೆಸರು ನಾಮುವೆಲಾದರೆ, ಹಾಡಿನ ಮೇಷ್ಟರು ನಾರಣ ತೆಗೆದು ನಾಮಲ ಮಾಡುವರು; ಹಬೀಬುಲ್ಲನಾದರೆ ಹಾಬಿಬ; ತಿಮ್ಮಯ್ಯನಾದರೆ ತೀಮಯ; ಮಹಾಬಲವಾದರೆ, ಮಾಬಲ; ಮಾದಪ್ಪ ವಾದರೆ, ಮಾದಪ....ಅದಕ್ಕಿಂತ ಉದ್ದವಾದ ಹೆಸರಾದರೆ, ಮುಂದೆ ಅದೇ ಪಂಕ್ತಿ ಯಲ್ಲಿ ಅದಕ್ಕಾಗಿಯೇ ಸೇರಿಸಿರುವ 'ಗಡಂ' ನ್ನು ತೆಗೆದು, ಆ ಜಾಗವನ್ನೂ ಭರ್ತಿಮಾಡಲು ಅದರ ಅನಾಮಧೇಯ ಕವಿಯ ಅಡ್ಡಿ ಏನೂ ಇಲ್ಲ. ಮಹಾ ಬಲಕಾವ್ಯರತ್ನಮಾಲೆಯ ಬೆಲೆಯನ್ನರಿತ ರಾಯರಿಗೆ, ಅದರ ಪಠನದಿಂದ, ತಮ್ಮ ಸರ್ವೀಸಿನಲ್ಲಿ, ಇತರರಿಗೆ ಆ ಹಾಡಿನಿಂದ ಲಭಿಸಿದ ಹತ್ತಾರು ಶುಷ್ಕೋಪ ಚಾರಗಳ ನೆನಪುಂಟಾಗಿ, ಅವರು ಕಿರುನಗೆ ಬೀರಿದರು. ಗಮಕಿ ಅದನ್ನು ಉತ್ತೇಜನ ಸೂಚಕವಾಗಿ ಭಾವಿಸಿ ದನಿ ಏರಿಸಿದ್ದರಿಂದ, ಕೂಡಲೇ ಅವರು ಅದ ಕ್ಕಾಗಿ ಪಶ್ಚಾತ್ತಪಿಸಬೇಕಾಗಿ ಬಂತು.

ಕಡೆಗೂ, ಗಮಕ ಮುಗಿಯಿತು. ಆದರೆ, ಕೂಡಲೇ, ಗೋವಿಂದು ಎದ್ದ! ರಾಯರ ಭಾವನೂ ಬಂದು ಅವನೆದುರು ನೆಲದಲ್ಲಿ ಕೂತುಕೊಂಡ. ಭಾವ ತಿದ್ದಿಕೊಟ್ಟಿದ್ದ ಭಾಷಣವೊಂದನ್ನು, ಗೋವಿಂದು ತಪ್ಪು ತಪ್ಪಾಗಿ ಓದಲಾರಂಭಿ ಸಿದ. ಪಿ. ಟಿ. ಮಹಾಬಲರಾವ್, ಬಿ.ಎ , ಎಲ್.ಟಿ , ಬಿ.ಎಲ್. ಎಂಬ ಪದ ಜೋಡಣೆ ಆ ಭಾಷಣದಲ್ಲಿ ಪುಟಕ್ಕೆ ಹತ್ತುಸಲವಾದರೂ ಬರುತ್ತಿತ್ತು. ಬಿ ಎ. ಗೂ ಬಿ.ಎಲ್. ಗೂ ನಡುವೆ ಆ ಎಲ್.ಟಿ. ಎಂಬ ಬಿರುದು ಹಾಲಿಗೆ ಹುಳಿ ಹಿಂಡಿದಂತೆ, ಅಂಗಾಲಿಗೆ ಮುಳ್ಳು ಚುಚ್ಚಿದಂತೆ, ರಾಯರಿಗೆ ತುಂಬಾ ಬಾಧೆ ಕೊಡುತ್ತಿತ್ತು. ಎಷ್ಟೇ ದೊಡ್ಡ ಅಧಿಕಾರದಲ್ಲಿದ್ದರೂ ಅವರನ್ನು ಅದು ಥಟಕ್ಕನೆ ಬಡ ಮೇಷ್ಟ್ರುಗಳ ಮಟ್ಟಕ್ಕೆ ಇಳಿಸಿಬಿಡುತ್ತಿತ್ತು. ಮೂವತ್ತೆರಡು ವರ್ಷಗಳ ಹಿಂದೆ ಯಾರದೋ ಮಾತು ಕೇಳಿ ಮನಸೋತು ಸೈದಾಪೇಟೆಗೆ ಹೋದದ್ದರಿಂದ, ಮುಖದಮೇಲೆ ಎರಡು ಮಚ್ಚೆಗಳು ಬಂದ ಹಾಗೆ ಆಡಿನ ಗಲ್ಲದ ಸ್ತನಗಳಹಾಗೆ, ಆ ಎರಡಕ್ಷರಗಳು ಅವರ ಹೆಸರಿಗೆ ಅಂಟಿಕೊಂಡು ಬಿಟ್ಟಿದ್ದುವು. ಮಹಾಬಲರಾವ್ ಎಂದು, ಅಷ್ಟನ್ನು ಮಾತ್ರ ಹೇಳುವುದೇ

ಸಾಮಾನ್ಯವಾದ ಪದ್ಧತಿಯಾದರೂ ಸಲಸಲಕ್ಕೂ ಪಿ ಟಿ,ಎಲ್.ಟಿ, ಬಿ ಎ, ಬಿ.ಎಲ್. ಎಂಬ ತಲೆಬಾಲಗಳನ್ನೆಲ್ಲ ಗೋವಿಂದು ಸೇರಿಸಿದ್ದು ರಾಯರಿಗೆ ರುಚಿಸಲಿಲ್ಲ. ಅಲ್ಲದೆ, ಮಹಾಬಲ ಎಂಬುವ ಕಡೆಯಲ್ಲೆಲ್ಲ ವೃಥಾಶ್ರಮ ವಹಿಸಿ ಗೋವಿಂದು ಮಹ್ಹಾಬಲ ಎನ್ನುವನು! ಬಲವೆಲ್ಲ ಕುಂದಿ, ಬಿಲಕ್ಕೆ ಸೇರಿಕೊಳ್ಳುವ ಆಸಾಮಿಗೆ ಮಹ್ಹಾಬಲ ಎಂಬ ಅವನ ಅದಟನ್ನು ನೋಡಿ, ಆ ಹುಚ್ಚಾರಣೆಗೆ ರಾಯರು ಬೆದರಿದರು.

"ಅಸಹ್ಯ ಮನುಭೋಕ್ತವ್ಯಂ" ಎಂದು ಹೇಳುತ್ತ, ರಾಯರು ಆಹ್ವಾನ ಪತ್ರಿಕೆಯನ್ನು ಓದುತ್ತಾ ಕುಳಿತಿದ್ದರು. "ಇನ್ನೂ ಆರೇಳು ಪುಟವಾದರೂ ಇರಬೇಕು, ಕೈಯಲ್ಲಿರೋ ಕಂತೆ ನೋಡಿದರೆ!....ಅಂದರೆ, ಪುಟಕ್ಕೆ ಹನ್ನೆರಡು ಮಹ್ಹಾಬಲ...." ಎಂದು ರಾಯರು ನಡುಗುತ್ತಿರುವಾಗಲೇ, ಅವರೆದುರಿಗಿದ್ದ ಚಿಕ್ಕ ರೂಮಿನಲ್ಲಿ ಯಾರದೋ ಕೆನ್ನೆಗೆ ಯಾವನೋ ಫಳಾರನೆ ಒಂದು ಏಟು ಬಿಟ್ಟ. ಆ ಸದ್ದಿಗೆ ಎಲ್ಲ ಗೋಡೆಗಳೂ ಮಾರುಲಿದುವು; ನಾಲ್ಕಾರು ಊದು ಕಡ್ಡಿಗಳು ಕೆಳಕ್ಕೆ ಬಿದ್ದುವು. ಹೊಡೆದವನು ಉಪ್ಪು ಹುಳಿ ಖಾರ ಮಣ ಗಟ್ಟಲೆ ನುಂಗುವ ಪ್ರಾಣಿಯಾಗಿದ್ದಿರಬೇಕು; ಏಕೆಂದರೆ, ಅವನ ಕೋಪ ಕಾಳಕೂಟದಂತೆ ಕೆರಳಿಬಿಟ್ಟಿತ್ತು....ಕೂಡಲೇ "........ಮಗನೇ!" ಎಂಬ ಭೇರೀನಾದದೊಂದಿಗೆ ಮತ್ತೊಂದು ಸಲ ಸಿಡಿಲೆರಗಿತು. ಏಟು ತಿಂದವನ ತಲೆ ಯೊಳಗೆ ಪುಂಖಾನುಪುಂಖವಾಗಿ ಇಂದ್ರ ಧನುಸ್ಸುಗಳು ಚಿಮ್ಮಿ ಚೀರಿದುವು. ದವಡೆ ಊದಿದ ಇಬ್ಬರು ಸದ್ಗೃಹಸ್ಥರು ಸಭಾಮಧ್ಯಕ್ಕೆ ಧಾವಿಸಿ ಊಳಿಟ್ಟರು.

ಅವರಿಬ್ಬರ ಪೈಕಿ, ನಾರಣಪ್ಪನವರು ಓಡಿಬಂದು ಪುಸಕ್ಕನೆ ಮಹಾ ಬಲರಾಯರ ಕುರ್ಚಿಯ ಹಿಂದೆ ಅವಿತುಕೊಂಡರು. ಅವರನ್ನಟ್ಟಿಸಿಕೊಂಡು ಅರಚುತ್ತಿದ್ದ ಅಕೌಂಟೆಂಟ್ ಅನಂತಯ್ಯನವರು ರಾಯರ ಮುಂದಿದ್ದ ಮೇಜಿನ ಮೇಲೆ ಲಗ್ಗೆ ಹತ್ತುವುದಕ್ಕಾಗಿ ಪಂಚೆ ಬಿಗಿಯುತ್ತಿದ್ದರು. ಆದರೆ ಈ ಸಮರಣ ಸನ್ನಾಹವನ್ನು ಕಂಡು ಗಾಬರಿಗೊಂಡ ಭಾವನವರೂ ನಾಲ್ಕೈದು ಸಹೋದ್ಯೋಗಿಗಳೂ ತಕ್ಷಣ ಎದ್ದು ಅನಂತಯ್ಯನವರನ್ನು ಎಳೆದು ನೆಲದ ಮೇಲೆ ಮಲಗಿಸಿ ಒತ್ತಿ ಹಿಡಿದರು. ಅಲ್ಲೇ ಹೊರಳಾಡುತ್ತಾ ಅವರು, ತಮ್ಮ ಕೈಯಲ್ಲಿ ಹಿಡಿದಿದ್ದ ದೊನ್ನೆಯೊಳಗಿಂದ, ಬಿಸಿ ಬಿಸಿ ಬೈಗಳು ಬೆರಸಿದ ಬೋಂಡ ಗಳನ್ನು ನಾರಣಪ್ಪನವರ ಮುಖಕ್ಕೆ ಗುರಿ ಇಟ್ಟು ಹೊಡೆದರು. "ನನ್ನನ್ನ ಜಾತಿ

ಕೆಡಿಸುವುದಕ್ಕೆ ನೋಡ್ತಿಯಾ, ಗುರುವಾರದ ದಿನ, ಈರುಳ್ಳಿ ತಿನ್ನಿಸಿ?" "ಎಷ್ಟು ಹಣ ಲಾಭ ಹೊಡೆದೆಯೋ ಇವತ್ತು ಈ ಆಟ ಕಟ್ಟಿ, ಅಕೌಂಟ್ ಕೊಡೋ, ನೋಡ್ತೇನೆ." "ಎರಡು ರೂಪಾಯಿ ಚಂದಾ ತೆರಲೇ ಬೇಕು ಅಂತ ಅಂಗೈ ನೀಡಿದ್ದೆಯಲ್ಲೋ, ಮಂಗ! ಮೂರು ಮೂರು ಬೋಂಡಾನೇನೋ ಕೊಡೋದು, ನೀನು? ಅಷ್ಟಕ್ಕೂನೂ?" ಎಂದು ಮುಂತಾಗಿ ಕೂಗಾಡಿದರು. ಅವರ ಬಾಯಿಗೆ ಅಡ್ಡವಾಗಿ ಸ್ನೇಹಿತರು ಹಿಡಿದ ಕೈಗಳಿಗೆಲ್ಲ ಅವರು ತಮ್ಮ ಮುರುಕು ಹಲ್ಲಿನ ಸಾಲು ಇನ್ನೂ ಎಷ್ಟು ಹರಿತವಾಗಿತ್ತೆಂಬುದನ್ನು ನಿರ್ದಾಕ್ಷಿಣ್ಯವಾಗಿ ಪರಿಚಯ ಮಾಡಿಕೊಡುತ್ತಿದ್ದರು.

ಗೋವಿಂದು, ಪಾಪ, ಕಾಗದದ ಕಂತೆಯನ್ನು ಹಿಡಿದುಕೊಂಡು, ನಿಂತೇ ಇದ್ದ; ಬರಬರನೆ ಓದುತ್ತಲೇ ಇದ್ದ. ಭಾಷಣವನ್ನು ಮುಂದುವರಿಸುತ್ತಿದ್ದರೆ, ಅದರ ಪದಲಾಲಿತ್ಯಕ್ಕೆ ಬೆರಗಾಗಿ, ಅದನ್ನು ಕೇಳುವ ಕುತೂಹಲದಲ್ಲಿ, ಸಭಿಕರೆಲ್ಲರೂ ಶಾಂತರಾಗುವರೆಂಬುದು ಅವನ ಊಹೆ. ಪ್ರೇಕ್ಷಕರ ಹಾಹಾಕಾರವೇ ಪುಂಡರಿಡುವ ಕಿಚ್ಚಿಗೆ ಬಿರುಗಾಳಿ. ಸಂಯುಕ್ತ ರಾಷ್ಟ್ರ ಸಂಸ್ಥೆಯ ಶಾಸನವನ್ನು ಸಿದ್ಧಪಡಿಸಿದ ಕನಸಿಗರಂತೆ, ಗೋವಿಂದು ಕೂಡ, ತನ್ನ ವಚನರಚನಾ ಚಾತುರ್ಯಕ್ಕೆ ತಾನೇ ಮನಸೋತಿದ್ದ. ಮಾತಿನ ಮಾಟದಿಂದ ಮಾನವನ ಮಂಗತನವನ್ನು ಗೆಲ್ಲಬಹುದೆಂಬುದು ಅವನ ಕನಸು! ಭಾಷಣದಲ್ಲಿ ಅವನು ಮಹಾಬಲರಾಯರನ್ನು ಅಜಾತಶತ್ರು, ಪುಣ್ಯಕೋಟಿ, ದಾರಾಷುಕೊ, ಸರ್ ಜಾನ್ ಷೋರ್, ಮುಂತಾದ ಐತಿಹಾಸಿಕ ಸಾಧುಪ್ರಾಣಿಗಳಿಗೆ ಹೋಲಿಸಿದ್ದ. ಆದರೆ, ಅವನ ಬರೆವಣಿಗೆಗೆ ಮೆಚ್ಚಿ, ಅಂದು, ಅಲ್ಲಿ, ಆಗ, ಕೊಂಡಾಡುವವರು ಯಾರು? ಹಣಾಹಣಿಯಿಂದ ಕಿವುಡುಬಡಿದ ಮಹಿಷ ದ್ವಯದ ಮುಂದೆ ಅವನ ಕಿನ್ನರಿ ಛಿನ್ನಭಿನ್ನವಾಯಿತು.

ಅನಂತಯ್ಯನವರು, 'ಚಾಡಿಕೋರ' ಎಂದು ಮಹಾಬಲರಾಯರು ದೂಷಿಸುತ್ತಿದ್ದ ಆ ಹೊಸ ಸಾಹೇಬರ ಸಾಕ್ಷಾತ್ ಕರಟಕ! ನಾರಣಪ್ಪನವರೋ ರಾಯರ ತಮ್ಮಡಿ! ಅವರಿಬ್ಬರ ಜಗಳ ಬಹು ದಿವಸದಿಂದ ಬೇರೂರಿದ್ದು. "ಆಯಿತು ನಿನ್ನ ಆಟ, ನಿನ್ನೆಗೇನೆ" ಎಂದು ಅನಂತಯ್ಯನವರು ಆರ್ಭಟಿಸಿದರು! ಇಬ್ಬರೂ ತಮ್ಮ ನಾಯಕರನ್ನು ಹೊಗಳುತ್ತಾ, ಎದುರಾಳಿಯ ಇಷ್ಟ ದೇವತೆಯನ್ನು ಹೀನಾ ಮಾನವಾಗಿ ಬೈದರು. ಬಾಣ ಪಿತೃ ಪಿತಾಮಹ

ಪ್ರಪಿತಾಮಹಾದಿಗಳ ತನಕ, ಏಕೆ, ಮಾತಾಮಹಿ ಮಾತುಃಪಿತಾಮಹಿಯರ ವರೆಗೂ, ಭುವರ್ಲೋಕ ಏಕೆ ಸುವರ್ಲೋಕಕ್ಕೂ ಏರಿತು. ಅಧಿಕಾರ ಸೂತ್ರ ವನ್ನು ಕೈಯಲ್ಲಿ ಹಿಡಿದಿದ್ದಾಗಲೇ ಹಸುವಿನಂತಿದ್ದ ಮಹಾಬಲರಾಯರು ಈಗ ಕೊಂಬುಗಳು ಕಳಚಿದಮೇಲೆ, ತಿವಿಯಲಾರದೆ ಹೋದರು. ಅವರು ಸದ್ದಿಲ್ಲದೆ, ತಮ್ಮ ಪೀಠದಿಂದೆದ್ದು, ಹೊರಗಿನ ವರಾಂಡಕ್ಕೆ ಹೋಗಿ, ಕಟಕಟೆಯ ಮೇಲೊರಗಿಕೊಂಡು, ಇನ್ನೊಂದಿಷ್ಟು ಗಾಳಿ ಕುಡಿದರು.

ಆಗ ಭಾವನವರು ಗಟ್ಟಿಯಾಗಿ 'ಸದ್ದು' ಎಂದು ಸದ್ದುಮಾಡಿದರು. ಕಾರ್ಯಕಲಾಪಗಳ ಹತೋಟಿಯ ಹವ್ಯಾಸವನ್ನೆಲ್ಲ ತಾವು ವಹಿಸಿಕೊಂಡರು. "ಬನ್ನಿ, ಇಲ್ಲಿ" ಎಂದು ಅವರು ತೋಳನಂತಿದ್ದ ಅನಂತಯ್ಯನವರ ತೋಳನ್ನು ದರದರನೆ ಒಂದು ಮೂಲೆಗೆ ಎಳೆದೊಯ್ದರು. ಅಲ್ಲಿ ಅವರನ್ನು ಕೂರಿಸಿಕೊಂಡು, "ಸ್ವಾಮಿ! ಗುರುವಾರ ನೀವು ಈರುಳ್ಳಿ ಬಾಯಿಗೆ ಹಾಕಿ ನಿಮ್ಮ ಗುರುಗಳ ಗಮನವನ್ನು ನಿಮ್ಮ ಕಡೆ ಸೆಳೆದದ್ದರಿಂದ, ನಿಮಗೆ ಅನುಕೂಲವೇ ಆಗುತ್ತದೆ, ನೋಡಿ. ಇವತ್ತಿನ ಈ ಕದನವನ್ನೆಲ್ಲ ನಾರಣಪ್ಪ ತನ್ನ ಮನೆಯಲ್ಲೇ ಖುದ್ದಾಗಿ ಮಾಡಿಸಿದ ಅಂತ ಹೊಸ ಸಾಹೇಬರಿಗೆ ತಿಳಿಸುವ ಏರ್ಪಾಟು ಮಾಡೋಣ, ಸುಮ್ಮನಿರಿ! ಆಮೇಲೆ, ಈ ನಾಚಿಕೆಗೆಟ್ಟ ನಾರಣಪ್ಪನಿಗೆ ಐದು ರೂಪಾಯಾದರೂ....ನಿಮ್ಮ ಗುರುಗಳ ಅನುಗ್ರಹದಿಂದ, ಜುಲ್ಮಾನೆ ಬೀಳದೆ ಹೋದರೆ....ನನ್ನನ್ನ ಕೇಳಿ!" ಎಂದು ಅಕೌಂಟೆಂಟರನ್ನು ಬಲು ಬೇಗ ಸಮಾಧಾನಪಡಿಸಿದರು. ಹಾಗೆಯೇ, ನಾರಣಪ್ಪನವರನ್ನೂ ಕುರ್ಚಿ ಹಿಂದಿನಿಂದ ಮೆಲ್ಲನೆ ನಡೆಯಿಸಿಕೊಂಡು, ಅವರ ಆಗ್ರಹವನ್ನು ಪಕ್ಕದ ಕೋಣೆಗೆ ಸಾಗಿಸಿ, "ಈ ಅಂತರಪಿಶಾಚಿ ಅನಂತಯ್ಯನ ಆಡಾಳುಡಿ ನಿಲ್ಲಿಸುವುದಕ್ಕೆ ಎಷ್ಟು ಹೊತ್ತು ಬೇಕು, ನಾರಣಪ್ಪನವರೇ! ಇವತ್ತು ಇಲ್ಲಿ ಸದ್ಯಕ್ಕೆ ಸುಮ್ಮನಿರಿ! 'ನಾನೂ ಹೊಸ ಸಾಹೇಬರೂ ನಂಟರು! ನನ್ನ ಮಗನಿಗೆ ಅವರು ಹೆಣ್ಣು ಕೊಡುವ ಸಂಭವ ಇದೆ' ಎಂದು ಅನಂತಯ್ಯ ಹೆಡೆ ಆಡಿಸಿದ ಅಂತ ಒಂದು ಸುದ್ದಿ ಹೊರಡಿಸೋಣ! ಅದನ್ನು ಕೇಳಿ 'ಎಲಾ! ಧೂರ್ತ! ನನ್ನ ಕುಲಕ್ಕೆ ಕೊಳೆ ಮೆತ್ತಿದನೇ, ಇವನು? ಬಾಲ ಆಡಿಸೋ ಅಷ್ಟು ಸಲಿಗೆ ಕೊಟ್ಟರೆ, ಬಗಲಲ್ಲೇ ಹತ್ತಿಬಿಡುತ್ತಾನಲ್ಲ' ಎಂದು ರೇಗಿ, ಹೊಸ ಸಾಹೇಬರು ಅನಂತಯ್ಯನನ್ನ ಕೂಡಲೇ ಕೊಪ್ಪಕ್ಕೆ ವರ್ಗಮಾಡಿಬಿಡುತ್ತಾರೆ. ತೆಪ್ಪಗಿರಿ!"

ಎಂದು ಅವರ ಕಿವಿಯಲ್ಲಿ ಉಸುರಿದರು. ನಾರಣಪ್ಪನವರಿಗೆ ಆನಂದವಾಗಿ ಹೋಯಿತು. ದವಡೆ ಉಜ್ಜಿಕೊಳ್ಳುತ್ತ ಹೊರಬಂದು ಅವರು ಜಮಖಾನೆಯ ಒಂದು ತುದಿಯಲ್ಲಿ ಕೂತರು. ಗೋವಿಂದು ಭಾಷಣ ಮುಗಿಯಿತು. ಆದರೆ ಭಾವನವರು ಮಾತ್ರ ಮಹಾಬಲರಾಯರು ಎಲ್ಲಿ ಎಂದು ಹುಡುಕಿ, ಅವರು ವರಾಂಡಾದಲ್ಲಿ ನಿಂತಿರುವುದನ್ನು ಕಂಡು, ಅಲ್ಲಿಗೆ ಹೊರಟರು.

* * *

ಭಾವನವರ ವಯಸ್ಸು ಅರವತ್ತರ ಹತ್ತಿರ. ಅವರಿಗೆ ನಿರ್ದಿಷ್ಟವಾದ ಕಾಲಕ್ಷೇಪದ ಮಾರ್ಗ ಯಾವುದೂ ಇರಲಿಲ್ಲ. ವೆಂಗಡೂರಿನ ಶ್ರೀಮಂತರು ವಾಸಿಸುವ ಹಸುವಿನಗುಡಿ ಉಪನಗರದಲ್ಲಿ ಅವರಿಗೊಂದು ಸ್ವಂತ ಮನೆ ಇತ್ತು. ಹಿರೇಹಳ್ಳಿಯ ಸಮೀಪದಲ್ಲಿ ಹನ್ನೆರಡೆಕ್ರೆ ಜಮೀನಿತ್ತು. ಶೀನಪ್ಪ ಎಂತಲೇ ಊರವರೆಲ್ಲ ಅವರನ್ನು ಕರೆಯುವುದು. ಅವರ ತಂದೆ ಸಬ್‌ಡಿವಿಜನ್ ಆಫೀಸರ್‌ಗಿರಿಗೇರಿ ಹೃದಯವೇದನೆಯಿಂದ ತೀರಿಕೊಂಡಿದ್ದರು. ಹತ್ತಾರು ತಾಲ್ಲೂಕುಗಳಲ್ಲಿ ಸರ್ಕಾರಿ ಚಾಕರಿಮಾಡಿ, ಹೆಸರು ಕೆಡಿಸಿಕೊಂಡ ಪುಣ್ಯ ವ್ಯಕ್ತಿ. ತಂದೆಯವರು ಹೀಗೆ ತಮ್ಮ ಹೆಸರಿನ ದುರುಪಯೋಗದಿಂದ ಕೊಂಡ ಹೊಲಮನೆಗಳೇ ಶೀನಪ್ಪನ ಜೀವನಾಧಾರ. ಶೀನಪ್ಪನ ವಿದ್ಯಾಭ್ಯಾಸ ಕೂಡ ನಿರಾತಂಕವಾಗಿ ನೆರವೇರಿರಲಿಲ್ಲ. ಭಾಗೀರಥೀ ತೀರ್ಥವನ್ನು ಆಕಾಶದಿಂದ ಇಳಿಸಲು ಪ್ರಯತ್ನಿಸಿದ ಪುರಾಣಪುರುಷ, ಜಯವನ್ನು ಪಡೆದ. ಆದರೆ, ಸರಸ್ವತೀ ಪ್ರಸಾದವನ್ನು ಮೇಲು ಮೇಲಕ್ಕೇರಿಸಲು ಪ್ರಯತ್ನಿಸಿದ ಶೀನಪ್ಪ ಸೋಲನ್ನು ಕಂಡ. ಹತ್ತನೆಯ ಕ್ಲಾಸಿನಲ್ಲೇ ಶೀನಪ್ಪ ಶಿಕ್ಷವಾತದಿಂದ ಕುಳಿತೇ ಬಿಟ್ಟ. ಅಲ್ಲಿಂದ ಮುಂದಕ್ಕೆ ಚಿಲ್ಲರೆ ಟೆಸ್ಟುಗಳನ್ನು ತಟಾಯಿಸಿ, ಶೀನಪ್ಪ ಪ್ಲೀಡರಾದ; ಸಣ್ಣದೊಂದು ಹಲಗೆ ತುಂಡಿನಲ್ಲಿ ಮನೆ ಮುಂದೆ, ಅವನ ಹೆಸರು ಥಳಥಳಿಸಿತು. ಮೂರು ದಿನವೇ ತಂದೆಯವರು ಕಣ್ಣು ಮುಚ್ಚಿದರು.

ಹೊಟ್ಟೆ ತುಂಬಿದವರು ಯಾರಿಗಾದರೂ ಪರರ ಕಷ್ಟದಲ್ಲಿ ಮರುಕ ಹುಟ್ಟುತ್ತದೆಯೆ? ಮರುಕ ಹುಟ್ಟದೆ ಇದ್ದರೆ, ಅವರ ಪರವಾಗಿ, ಕಾನೂನು ಬೋನುಗಳಲ್ಲಿ ಕಂಡಿಗಳನ್ನು ಹುಡುಕಿ, ಅವರ ಹಣಕ್ಕಾಗಿ ವಾದಿಸುವುದಕ್ಕಾಗುತ್ತದೆಯೆ? "ಮಹಾ! ಈ ಮುನ್ನೂರು ರೂಪಾಯಿಗಾಗಿ ಮೂರು ವರ್ಷ ಕೋರ್ಟಿನ ಮೆಟ್ಟಲು ಸವೆಸುವುದು ಯಾಕೊ? ಬಿಟ್ಟುಬಿಡೋ!" "ಅಂಗೈ

ಯುಗಲದ ಜಾಗಕ್ಕೆ ಅಣ್ಣ ಒಬ್ಬ, ತಮ್ಮಂದಿರು ತೊಂಬತ್ತೊಂಬತ್ತು! ಕೊಟ್ಟು ಕೈ ತೊಳೆದುಕೊಂಡುಬಿಡೋ!" "ನಿನಗೆ ಮಾನ ಇಲ್ಲ, ಮರ್ಯಾದೆ ಇಲ್ಲ, ಅಂತ ರಸ್ತೆ ಚೌಕದಲ್ಲಿ ನಿಂತು ಅವನು ಬೈದ ತಾನೆ? ಅವನು ಹೇಳಿದ್ದೇ ಸೈ ಎಂದು ಕೆಟ್ಟುಬಿಡೋ!" ಎಂದು ಮುಂತಾಗಿ ಕಕ್ಷಿಗಾರನಿಗೆ ಉಪದೇಶ ಮಾಡುವುದು ಅವನ ಹಿತಸಾಧನೆಗೆ ಸಹಾಯಕವಾದರೂ, ಆದರಿಂದ, ಶೀನಪ್ಪನಿಗೇನೂ ಅನುಕೂಲವಾಗಲಿಲ್ಲ. ಅವನ ಕೋಣೆಗೆ ಕಕ್ಷಿಗಾರರೂ ಬರಲಿಲ್ಲ; ಪ್ರತಿಕಕ್ಷಿಗಾರರೂ ಬರಲಿಲ್ಲ.

ಮಹಾಬಲರಾಯರ ಅಕ್ಕನನ್ನು ಆಕೆಯ ಜಾತಕದಲ್ಲಿ ಪತಿಗೆ ಅಮೃತತ್ವ ವಿದ್ದದ್ದರಿಂದಲೇ ಅಲ್ಪಾಯುಷ್ಯಿನ ಜಾತಕದ ಶೀನಪ್ಪನಿಗೆ ತಂದುಕೊಂಡದ್ದು! ಶೀನಪ್ಪನವರೊಂದಿಗೆ ಮೂರು ವರ್ಷ ಸಂಸಾರ ನಡೆಯಿಸಿ ಅವರಿಗೆ ಅಮೃತತ್ವ ದಯಪಾಲಿಸಿ ಮೊದಲನೆಯ ಹೆರಿಗೆಯಲ್ಲೇ ಕೂಸಿನೊಂದಿಗೆ ಆಕೆ ಕೈಲಾಸ ಸೇರಿದಳು. ಆ ಮೂರು ವರ್ಷಗಳ ದಾಂಪತ್ಯದ ನೆನಪು ಉಳಿದಷ್ಟು ಕಾಲ ಅವರು ಬೇರೊಂದು ವಿವಾಹಕ್ಕೆ ಒಪ್ಪಿಗೆ ಕೊಡಲೇ ಇಲ್ಲ. ಯಾವ ವಿವಾಹ ಮಂಟಪವನ್ನೂ ಕೂಡ ಅವರು ಅಲ್ಲಿಂದಾಚೆ ಶೋಭಾಯಮಾನ ಮಾಡಲಿಲ್ಲ. ಅವರ ಸ್ನೇಹಿತರೂ ನೆರೆಹೊರೆಯವರೂ ಅನೇಕ ಗೃಹಸ್ಥರೂ, ತಮ್ಮಂತೆಯೇ ಅವರನ್ನೂ ಕೂಪಕ್ಕೆ ಬೀಳಿಸಲು ಎಡೆಬಿಡದೆ ಪ್ರಯತ್ನಪಟ್ಟರು. ಆದರೆ, ಅವರು ಇಪ್ಪತ್ತು ಇಪ್ಪತ್ತೈದು ವರ್ಷಗಳ ತನಕ ಎದೆಗೆಡದೆ, ಮೂರು ವರ್ಷದ ತಮ್ಮ ಆ ಮೂಗುದಾರವನ್ನೇ ಮೆಲ್ಲುತ್ತಿದ್ದರು.

"ಹೆಣ್ಣು ಪಂಜರ ಜೀವಿ; ಗಂಡು ಅಂಬರ ಜೀವಿ; ಮೂವತ್ತಾರು ತಿಂಗಳ ಕಾಲ ಆಕೆಯೊಂದಿಗೆ ಗೂಡಿನಲ್ಲಿ ರೆಕ್ಕೆ ಮಡಿಸಿಕೊಂಡು ಬಾಳಿದ್ದಾಗಿದೆ, ಸಾಕು. ಇನ್ನು ಕಾರಾಗೃಹಸ್ಥನಾಗಲಾರೆ!" ಎಂದು ಅವರು ಮುಖ ತಿರುಗಿಸುವರು. "ನನಗೆ ನಮ್ಮ ಮಹೋಬ್ಲನೇ ಉದಾಹರಣೆ! ನೋಡಿ! ಅವನಹಾಗೆ ಸರಪಣಿ ತುದಿಯಲ್ಲಿ ತಿರುಗಾಡುವುದೆಂದರೆ ನನಗಾಗದು" ಎನ್ನು ವರು. ಅದಕ್ಕೆ ಪ್ರತಿಯಾಗಿ ಏನು ಹೇಳುವುದಕ್ಕೂ ತೋಚದೆ ನಂಟರಿಷ್ಟರು ಹಿಮ್ಮೆಟ್ಟುವರು.

ಹಿಂದಿನ ದಾಂಪತ್ಯ ಸ್ವಪ್ನವನ್ನು ಮರೆಯುವಹೊತ್ತಿಗೆ, ಶೀನಪ್ಪನವರ ಮುಂದಿನ ಸಾಲಿನ ಆರು ಹಲ್ಲುಗಳು ಒಂದೊಂದಾಗಿ ಕೆಳಕ್ಕೆ ಬಿದ್ದುವು. ಹಪ್ಪಳ

ತ್ತಿದ್ದಾಗ, ಷಾನನು ಅಧೋಮುಖನಾಗಿ ಅಳುತ್ತಿದ್ದನು. ಅತಿಶಯ ದುಃಖವು ಮಾತನಾಡಲಾಗದಂತೆ ಗಂಟಲನ್ನು ಹಿಡಿದುಕೊಂಡಿತ್ತು. ಆದರೆ ಆಗಾಗ್ಯೆ ಅಸ್ಪಷ್ಟವಾಗಿ "ನನ್ನ ಆ ಏಳು ಮರಿಗಳು— ಅನಾಥ ರಾದ ಆ ಪುಟ್ಟ ಮರಿಗಳು" ಎಂದು ಅನ್ನುತ್ತಿದ್ದನು. ಅವನ ಆ ಅಳು ವನ್ನು ನೋಡಿದರೆ, ಎದೆಬಿರಿಯುವಂತಹ ದುಃಖವು ಅವನಿಗಾಗಿರ ಬೇಕೆಂಬುದರಲ್ಲಿ ಸಂದೇಹವಿಲ್ಲ. ಹಾಗೆ ಅಳುತ್ತಲೇ ಬಲಗೈಯನ್ನು ಏಳು ಸಲ ಮೇಲಕ್ಕೆತ್ತಿ ಕೆಳಕ್ಕಿಳಿಸಿದ— ಅಲ್ಲಿಲ್ಲದ ಏಳು ಮಕ್ಕಳ ನೆತ್ತಿ ಯನ್ನು ಸವರಿದಹಾಗೆ! ಆ ಏಳು ಮಕ್ಕಳಿಗಾಗಿ ಅವನು ಆಗ ಅಪರಾಧಿಯಾದ! ಇನ್ನುಮುಂದೆ ಅವನು ಷಾನ್ ವಲ್ ಷಾನನಲ್ಲ; ಈಗ ಅವನೊಂದು ಅಂಕಿ ಮಾತ್ರ— ೨೪೬೦೧.

ಸೆರೆಮನೆಯ ವಾಸದ ನಾಲ್ಕನೆಯ ವರ್ಷದ ಕೊನೆಯಲ್ಲಿ ಒಂದು ದಿನ ಷಾನನು ಸೆರೆಮನೆಯಿಂದ ತಪ್ಪಿಸಿಕೊಂಡು, ಸುತ್ತ ಮುತ್ತಲಿನ ಹೊಲಗಳಲ್ಲಿ ಎರಡು ದಿನದ ಸ್ವಾತಂತ್ರ್ಯವನ್ನು ಅನು ಭವಿಸಿದ. ಎರಡನೆಯ ಸಾಯಂಕಾಲ ಅವನನ್ನು ಹಿಡಿದರು. ಅವನು ಈ ಎರಡು ದಿನಗಳೂ ನಿದ್ರಾಹಾರಗಳಿಲ್ಲದೆ ಅಲೆದಿದ್ದನು. ಸೆರೆ ಮನೆಯ ಅಧಿಕಾರಿಗಳು ಇನ್ನೂ ಮೂರು ವರ್ಷ ಸಜವನ್ನು ವಿಧಿಸಿ ದರು. ಆರನೆಯ ವರ್ಷದಲ್ಲಿ ಒಂದು ದಿನ ಪುನಃ ಇವನು ತಪ್ಪಿಸಿ ಕೊಂಡ. ಸಾಯಂಕಾಲ ಅಧಿಕಾರಿಗಳು ಬಂದು ಎಲ್ಲರೂ ಇದ್ದಾ ರೆಯೋ ಇಲ್ಲವೋ ಎಂದು ತಾಳೆ ನೋಡುತ್ತಿದ್ದ ಕಾಲದಲ್ಲಿ ಇವ ನಿಲ್ಲದ್ದು ತಿಳಿಯಿತು. ಕೂಡಲೆ ಸೆರೆಮನೆಯ ಮಾಳಿಗೆಯಿಂದ ಫಿರಂಗಿಯನ್ನು ಹೊಡೆದು ಸೂಚಿಸಿದರು. ಇವನನ್ನು ಹುಡುಕಲು ಎಲ್ಲ ಕಡೆಗೂ ಅಧಿಕಾರಿಗಳು ತೆರಳಿದರು. ಕಡೆಗೆ ಪ್ರಯಾಣಕ್ಕೆ ಸಿದ್ಧವಾಗಿ ರೇವಿನಲ್ಲಿದ್ದ ಒಂದು ಹಡಗಿನಲ್ಲಿ ಇವನು ಸಿಕ್ಕಿಬಿದ್ದ. ಅಲ್ಲಿಂದ ಇವನನ್ನು ಹಿಡಿದು ಎಳೆತಂದರು. ಈ ಸಲ ಸಜದ ಅವಧಿ ಯನ್ನು ಐದು ವರ್ಷ ಹೆಚ್ಚಿಸಿದರು. ಹದಿಮೂರು ವರ್ಷಗಳಾಯಿತು. ನಾಲ್ಕು ವರ್ಷ ಪುನಃ ಸೆರೆಮನೆಯ ನರಕವಾಸ. ಆಮೇಲೆ ಒಂದು ದಿನ ಪುನಃ ಸ್ವಾತಂತ್ರ್ಯಕ್ಕಾಗಿ ಪ್ರಯತ್ನ— ವಿಫಲ ಪ್ರಯತ್ನ. ಇದರ

ಫಲವಾಗಿ ಮೂರು ವರ್ಷ ಹೆಚ್ಚು ಸಜ—ಒಟ್ಟು ಹದಿನಾರಾಯಿತು. ಹದಿಮೂರನೆಯ ವರ್ಷದ ಕೊನೆಯಲ್ಲಿ ಕೊನೆಯ ಪ್ರಯತ್ನ ವೊಂದನ್ನು ಇವನು ಮಾಡಿದ. ಕೇವಲ ನಾಲ್ಕು ಗಂಟೆಗಳು ಮಾತ್ರ ಸೆರೆಮನೆಯ ಹೊರಗೆ ಇವನಿದ್ದುದು. ಪುನಃ ಹಿಡಿದು ಮೂರು ವರ್ಷ ಸಜವನ್ನು ವಿಧಿಸಿದರು. ಹೀಗಾಗಿ ಹತ್ತೊಂಬತ್ತು ವರ್ಷ ಸೆರೆ ಮನೆಯ ವಾಸವನ್ನು ಇವನು ಅನುಭವಿಸಿದ. ೧೮೧೫ರ ಅಕ್ಟೋಬರಿನಲ್ಲಿ ಇವನನ್ನು ಬಿಟ್ಟರು. ೧೭೯೬ರಲ್ಲಿ ಒಂದು ಚೂರು ರೊಟ್ಟಿ ಯನ್ನು ಕದ್ದ ಅಪರಾಧಕ್ಕಾಗಿ ಅವನು ಸೆರೆಮನೆಯ ಹೊಕ್ಕಿದ್ದು !

ಷಾನನು ಸೆರೆಮನೆಯನ್ನು ಪ್ರವೇಶಿಸಿದಾಗ ಭಯದಿಂದ ನಡುಗಿದ ; ಹೊರಬಿದ್ದಾಗ ಹಲ್ಲುಕಚ್ಚಿ ಮನಸ್ಸನ್ನು ಕಲ್ಲುಮಾಡಿದ್ದ. ಮನುಷ್ಯನಾಗಿ ಒಳಕ್ಕೆ ಹೋದ ; ಪಿಶಾಚಿಯಾಗಿ ಹೊರಬಿದ್ದ.

ಹತ್ತೊಂಬತ್ತು ವರ್ಷಗಳಲ್ಲಿ ಒಂದು ದಿನವೂ ಇವನು ನಗಲಿಲ್ಲ; ವಿಶೇಷವಾಗಿ ಮಾತನ್ನೂ ಆಡುತ್ತಿರಲಿಲ್ಲ — ಮೌನವಾಗಿರುವುದೇ ಹೆಚ್ಚು. ಯಾವಾಗ ನೋಡಿದರೂ ದೂರದಲ್ಲಿ ಏನನ್ನೋ ಕ್ರೂರ ದೃಷ್ಟಿಯಿಂದ ನೋಡುತ್ತಿದ್ದಂತೆ ಕಾಣುತ್ತಿತ್ತು.

ಷಾನನ ವಿಷಯದಲ್ಲಿ ಒಂದು ಮಾತ್ರ ವಿಸ್ಮಯವನ್ನುಂಟುಮಾಡು ವಂತಿತ್ತು. ಒಂದಾವೃತ್ತಿ ಸೆರೆಮನೆಯ ಖೈದಿಗಳೆಲ್ಲ ಆ ಊರಿನ ನಗರ ಭವನದಲ್ಲಿ ಕೆಲಸಮಾಡುತ್ತಿದ್ದರು. ಆಗ ಅಕಸ್ಮಾತ್ತಾಗಿ ದೊಡ್ಡದೊಂದು ಕಲ್ಲುಕಂಬ ಉರುಳಿತು. ಕೆಳಗೆ ಬಿದ್ದಿದ್ದರೆ ಹತ್ತಾರು ಜನರು ಸಿಕ್ಕಿಹೋಗುತ್ತಿದ್ದರು. ಆಗ ಹತ್ತಿರದಲ್ಲಿದ್ದ ಷಾನ್ ಓಡಿಹೋಗಿ ಆ ಕಂಬಕ್ಕೆ ಬೆನ್ನು ಊರೆಕೊಟ್ಟು ಬೀಳದಂತೆ ನೋಡಿಕೊಂಡನು. ಕೂಡಲೆ ಕೆಲಸಗಾರರು ದಪ್ಪವಾದ ಮರದ ತುಂಡುಗಳನ್ನು ತಂದು ಊರೆಕೊಟ್ಟು, ಷಾನನು ಹೊರಕ್ಕೆ ಬರುವಂತೆ ಮಾಡಿದರು. ಎಲ್ಲರೂ ಅವನ ಅಪಾರಶಕ್ತಿಯನ್ನು ನೋಡಿ ಆಶ್ಚರ್ಯಪಟ್ಟರು; ಅವನದು ಅಂತಹ ಶಕ್ತಿ.

ಅವಧಿಯು ಮುಗಿದಮೇಲೆ ಅವನನ್ನು ಸೆರೆಮನೆಯಿಂದ ಬಿಟ್ಟರು. ಆಗ ಏನು ಮಾಡಬೇಕೋ ಅವನಿಗೆ ತೋಚಲಿಲ್ಲ. ಹತ್ತೊಂಬತ್ತು

ವರ್ಷಗಳಲ್ಲಿ ಇವನು ದುಡಿದುದೆಂದು ಹನ್ನೆರಡಾಣೆಯನ್ನು ಕೊಟ್ಟರು. ಇದರಲ್ಲಿ ಏನುಮಾಡಬೇಕೆಂದು ಯೋಚಿಸುತ್ತ ಜೈಲಿನಿಂದ ಹೊರಟ ಇವನು, ಊರಾಚೆಯ ಹೆಂಡದ ಕಾರ್ಖಾನೆಯ ಬಳಿಗೆ ಬಂದನು. ಅಲ್ಲಿ ಕೂಲಿಯಾಳುಗಳು ಗಾಡಿಗಳಿಂದ ಮೂಟೆಗಳನ್ನು ಇಳಿಸಿ ಕಾರ್ಖಾನೆಗೆ ಹೊತ್ತು ಇಡುತ್ತಿದ್ದರು. ತಾನೂ ಕೂಲಿಮಾಡುವುದಾಗಿ ಷಾನನು ಹೇಳಿದ. ಕೆಲಸವು ಬಹಳ ಜಾಗ್ರತೆಯಾಗಿ ಆಗಬೇಕಾಗಿದ್ದು ದರಿಂದ ಕಾರ್ಖಾನೆಯ ಮಾಲೀಕ ಆಗಬಹುದೆಂದ. ಸಂಧ್ಯಾ ಕಾಲದವರೆಗೂ ದುಡಿಸಿ, ಆಮೇಲೆ ಮೂರಾಣೆ ಕೊಟ್ಟ. ಷಾನನು ಇದರ ಅನ್ಯಾಯವನ್ನು ತೋರಿಸಿ, ಉಳಿದವರಿಗೆ ಕೊಟ್ಟಂತೆ ತನಗೂ ಆರಾಣೆ ಕೊಡಬೇಕೆಂದ. ಕಾರ್ಖಾನೆಯ ಮಾಲೀಕ, "ಜೈಲಿನಿಂದ ಬಂದ ನಿನಗೆ ಅಷ್ಟು ಸಾಕು. ಸುಮ್ಮನೆ ಹೋಗು. ಪುನಃ ಜೈಲಿಗೇ ಹೋಗಬೇಕೆಂಬ ಆಸೆಯೋ?" ಎಂದು ಗದರಿಸಿ ಕಳುಹಿಸಿದ. ತನ್ನ ಹಣವನ್ನು ಅನ್ಯಾಯವಾಗಿ ಆ ಮಾಲೀಕ ಕದ್ದನೆಂದು ಷಾನನು ತೀರ್ಮಾನಿಸಿದ. ಆದರೆ ಏನು ಮಾಡಲೂ ಆಗದೆ ಬಾಯಿಮುಚ್ಚಿ ಕೊಂಡು ಮುಂದಕ್ಕೆ ಹೊರಟ.

ಅವನಿಗೆ ಎಲ್ಲೆಲ್ಲಿಯೂ ತಿರಸ್ಕಾರವೇ ದೊರೆಯಿತು. ಜನರು ಒಬ್ಬರೂ ಬಳಿಸೇರಿಸರು. ಜೈಲಿನಿಂದ ಬಂದವನು ಎಲ್ಲರಿಂದಲೂ ಎಲ್ಲದರಿಂದಲೂ ಬಹಿಷ್ಕೃತನೋ ಎನ್ನುವಂತೆ ಯಾರೊಬ್ಬರೂ ಒಂದು ಹಿಡಿ ಅನ್ನವನ್ನೂ ಅವನಿಗೆ ಹಾಕಲಿಲ್ಲ. ಈ ಸ್ವಾತಂತ್ರ್ಯ ಕ್ಕಿಂತ ಜೈಲಿನ ದಾಸ್ಯವೇ ಮೇಲೆಂದು ಇವನಿಗೆ ತೋರಿತು. ಜೈಲಿನ ದಾಸ್ಯಕ್ಕಿಂತಲೂ ಹೊರಗಿನ ಪ್ರಪಂಚದ ಸ್ವಾತಂತ್ರ್ಯವೇ ಹೆಚ್ಚು ದುಃಖ ಕರವಾಗಿ ಕಂಡಿತು!

ರಾತ್ರಿ ಎರಡು ಗಂಟೆ. ಪಕ್ಕದ ಚರ್ಚಿನಲ್ಲಿ ಗಂಟೆಯೂ ಹೊಡೆ ಯಿತು. ಆಗ ಷಾನನಿಗೆ ಎಚ್ಚರವಾಯಿತು. ಹತ್ತೊಂಬತ್ತು ವರ್ಷ ನೆಲದ ಮೇಲೆ ಮಲಗಿ ನಿದ್ರಿಸುವ ಅಭ್ಯಾಸವಿದ್ದವನಿಗೆ ಹಾಸಿಗೆಯ ಮೇಲೆ ಮಲಗಿದಾಗ ನಿದ್ರೆ ಸರಿಯಾಗಿ ಬಂದಿರಲಿಲ್ಲವೋ ಏನೋ?

ಪುನಃ ನಿದ್ರೆಮಾಡಲು ಪ್ರಯತ್ನಿಸಿದ. ಏನು ಮಾಡಿದರೂ ನಿದ್ರೆ ಬರಲಿಲ್ಲ— ಬಾ ಎಂದು ಕರೆದರೂ ಬಹು ದೂರ ಹೋಗುವ ಭಾಗ್ಯದಂತೆ!

ನಿದ್ರೆ ಬಾರದುದರಿಂದ ಯೋಚನೆಗಳು ಪ್ರಾರಂಭವಾದುವು. ಅವನಿಗೆ ಅನೇಕಾನೇಕ ಯೋಚನೆಗಳು ಬಂದುವು; ಆದರೆ ಒಂದು ಮಾತ್ರ, ದುರದೃಷ್ಟವಂತನಿಗೆ ಮೇಲೆ ಮೇಲೆ ಬರುವ ಸಂಕಟದಂತೆ, ಮೇಲಿಂದಮೇಲೆ ಬರುತ್ತಿತ್ತು. ಊಟಕ್ಕೆ ಬಡಿಸಲು, ಊಟಮಾಡಲು, ಕೈ ತೊಳೆದುಕೊಳ್ಳಲು ಎಲ್ಲವಕ್ಕೂ ಬೆಳ್ಳಿಯ ಪಾತ್ರೆಗಳನ್ನೇ ಈ ಮನೆಯವರು ಉಪಯೋಗಿಸಿದ್ದರು. ದೀಪದ ಕಂಬಗಳೂ ಬೆಳ್ಳಿಯವೇ! ಬೆಳ್ಳಿಯ ತಟ್ಟೆಗಳೇ ಸುಮಾರು ೨೦೦—೩೦೦ ರೂಪಾಯಿ ಬಾಳಬಹುದು—ಸಮಾಜವೂ ಸರ್ಕಾರವೂ ತನಗೆ ನ್ಯಾಯವಾಗಿ ಸಲ್ಲಬೇಕಾದ ಹಣವನ್ನು ಕೊಟ್ಟಿದ್ದರೆ ಅಷ್ಟು ಆಗುತ್ತಿತ್ತೇನೋ?

ಸುಮಾರು ಒಂದು ಗಂಟೆ ಕಾಲ ಅವನು ಈ ಯೋಚನೆಯೊಡನೆ ಹೆಣಗಾಡಿರಬೇಕು. ಮೂರು ಗಂಟೆ ಹೊಡೆಯಿತು. ಆ ಗಂಟೆಗೇ ಕಾದಿದ್ದವನಂತೆ, ತಕ್ಷಣವೇ ಹಾಸಿಗೆಯಿಂದೆದ್ದು, ತಲೆದೆಸೆಯಲ್ಲಿಟ್ಟುಕೊಂಡಿದ್ದ ಗಂಟನ್ನು ತೆಗೆದುಕೊಂಡನು. ಪುನಃ ಏನು ತೋರಿತೋ ಏನೋ, ತಲೆಯನ್ನು ಎರಡು ಕೈಗಳಿಂದಲೂ ಹಿಡಿದುಕೊಂಡು ಬಹಳ ಹೊತ್ತಿನವರೆಗೆ ಕುಳಿತುಕೊಂಡಿದ್ದನು—ಕೆಟ್ಟ ಯೋಚನೆಗಳಿಂದ ಭಾರವಾದ ತಲೆಯನ್ನು ಎತ್ತಿ ಹಿಡಿದವನಂತೆ! ಏನೇನೋ ಯೋಚನೆಗಳು—ಒಂದಕ್ಕೊಂದು ಸಂಬಂಧವಿಲ್ಲದ ಯೋಚನೆಗಳು. ಈ ಗೊಂದಲದ ಮಧ್ಯದಲ್ಲಿ ನೇರವಾದ ಒಂದು ಯೋಚನೆ ಮಾತ್ರ ಸ್ಪಷ್ಟವಾಗಿ ಹರಿಯುತ್ತಿತ್ತು—ಅದು ಆ ಬೆಳ್ಳಿಯ ಪಾತ್ರೆಗಳಿಗೆ ಸಂಬಂಧಪಟ್ಟುದು. ಬೆಲೆ ಸುಮಾರು ೨೦೦—೩೦೦ ರೂಪಾಯಿ; ಕಳ್ಳನ ಕೈಗೆ ಕೊಟ್ಟರೂ ೨೦೦ಕ್ಕೆ ಕಡಿಮೆ ಇಲ್ಲ! ಪಾನನು ಬೆಚ್ಚಿಬಿದ್ದ, ಕದ್ದಮೇಲೆ ಅವುಗಳನ್ನು ಮಾರುವುದು ಹೇಗೆ? ಇದೊಂದು ಬಗೆಹರಿಯದ ಸಮಸ್ಯೆ. ಏನೋ! ಕೆಲಸವೊಂದನ್ನು ಮಾಡಿದಮೇಲೆ ಅದರ ಪರಿಣಾಮವನ್ನು ನೋಡಿಕೊಂಡರೆ ಸರಿ— ಇವೇ ಮುಂತಾದ ಯೋಚನೆಗಳು ಅವನ ಮನಸ್ಸಿನಲ್ಲಿ ಹಾರಾಡ

ತೊಡಗಿದುವು. ಆಗ ನಾಲ್ಕು ಗಂಟೆ ಹೊಡೆಯಿತು. ಗಂಟೆಯ ಶಬ್ದ ಅವನನ್ನು ಕೆಲಸಮಾಡಲು ಎಬ್ಬಿಸಿದಂತೆ ತೋರುತ್ತದೆ.

ಹಾಸಿಗೆಯಿಂದ ಎದ್ದವನು, ಮೆಲ್ಲಗೆ ಕಿಟಿಕಿಯ ಬಾಗಿಲನ್ನು ತೆರೆದನು. ಅದು ದೊಡ್ಡ ಕಿಟಿಕಿ. ಕಬ್ಬಿಣದ ಸಲಾಕೆಗಳನ್ನು ಹಾಕಿರಲಿಲ್ಲ. ಕಿಟಿಕಿಯನ್ನು ದಾಟಿ ಹಿಂದಿನ ಹೂದೋಟಕ್ಕೆ ಸುಲಭವಾಗಿ ಹೋಗಬಹುದು. ಷಾನನು, ಕಿಟಿಕಿಯಿಂದ ಬಗ್ಗಿ ತೋಟವನ್ನೂ ಅದರಾಚೆಯ ಸಾಲುಮರಗಳನ್ನೂ ನೋಡಿ ಪುನಃ ಕಿಟಿಕಿಯ ಬಾಗಿಲನ್ನು ಹಾಕಿ ಒಳಕ್ಕೆ ಬಂದ. ಬಂದವನು, ಗಂಟಿನೊಳಗಿನಿಂದ ಒಂದು ಮೊಳ ಉದ್ದವಾದ ಕಬ್ಬಿಣದ ಮೊಳೆಯನ್ನು ತೆಗೆದಿಟ್ಟ. ಗಂಟನ್ನೂ ಕೋಲನ್ನೂ ಕಿಟಿಕಿಗೆ ಸಮೀಪವಾಗಿ ಇಟ್ಟು, ಮಿರಿಯಲ್ಲನ ಕೊಠಡಿಯ ಬಳಿಗೆ ಬಂದು ಬಾಗಿಲಿಗೆ ಕಿವಿಗೊಟ್ಟು ಆಲಿಸಿದ. ಒಳಗಿನಿಂದ ಏನೊಂದು ಶಬ್ದವೂ ಬರಲಿಲ್ಲ. ಷಾನನು ಮೆತ್ತಗೆ ಬಾಗಿಲನ್ನು ತಳ್ಳಿದ. ಒಳಗಡೆ ಅಗಳಿಯನ್ನು ಹಾಕಿರಲಿಲ್ಲವಾಗಿ, ಬಾಗಿಲು ಸುಲಭವಾಗಿ ತೆರೆಯಿತು. ಧೈರ್ಯದಿಂದ ಬಾಗಿಲನ್ನು ಪೂರ್ತಿಯಾಗಿ ತಳ್ಳಿದ. ಕೀಲೊಂದು ಕಿರ್ರನೆ ದನಿಗುಟ್ಟಿತು. ಷಾನನಿಗೆ ಫಿರಂಗಿ ಹೊಡೆದಷ್ಟು ಭಯವಾಯಿತು. ಎದೆ ಡಬಡಬನೆ ಬಡಿದುಕೊಳ್ಳಲಾರಂಭಿಸಿತು. ಆ ಚಳಿಯಲ್ಲಿಯೂ ಷಾನನು ಬೆವರಿದ. ಆ ಒಂದು ಕ್ಷಣ ಅವನಿಗೆ ವಿಶೇಷ ಭಯವಾಯಿತು. ಆ ಕೀಲೇ ಸಜೀವಿಯಾಗಿ, ಶಕ್ತಿಗೂಡಿ, ಕಾವಲಿನ ನಾಯಿಯಂತೆ ಬೊಗಳಿದಹಾಗೆ ಭಾಸವಾಯಿತು. ಆದರೆ ಅದೆಲ್ಲ ಅದೊಂದು ಕ್ಷಣಮಾತ್ರ! ಎಲ್ಲೆಲ್ಲಿಯೂ ನಿಶ್ಶಬ್ದ – ಆದರೂ ಅವನ ಉಸಿರೇ ಸುರಂಗದ ಗುಹಾಂತರಾಳದಿಂದ ಗರ್ಜಿಸಿಕೊಂಡು ಬರುವ ಬಿರುಗಾಳಿಯಂತಿತ್ತು.

ಕೆಲವು ನಿಮಿಷಗಳಾದನಂತರ, ಷಾನನು ಮೆಲ್ಲಗೆ ಕೊಠಡಿಯೊಳಗೆ ಕಾಲಿಟ್ಟು ನೋಡಿದ. ಗೋಡೆಯ ಪಕ್ಕದಲ್ಲಿ ಮಿರಿಯಲ್ಲನು ನಿದ್ರಿಸುತ್ತಿದ್ದ. ಅವನ ಮಂಚದ ಎದುರಿಗೆ, ಗೋಡೆಯಲ್ಲಿದ್ದ ಕಿಟಿಕಿ ಮುಚ್ಚಿತ್ತು. ಮೆತ್ತಗೆ ಅಡಿಯಿಡುತ್ತ ಷಾನನು ಹೋಗಿ ಕಿಟಿಕಿಯ ಬಾಗಿಲನ್ನು ತೆರೆದ. ಹೊರಗಿನಿಂದ ಬೆಳದಿಂಗಳು ತಕ್ಷಣ ಒಳಕ್ಕೆ

ಪ್ರವೇಶಿಸಿತು. ಆ ಕ್ಷಣಕ್ಕೆ ಸರಿಯಾಗಿ ಚಂದ್ರನನ್ನು ಮರೆಮಾಡಿದ್ದ ಮೋಡ ಸರಿದಿರಬೇಕು. ಷಾನನು ಹೊರಕ್ಕೆ ಬಗ್ಗಿ ನೋಡಿ ಹಿಂತಿರುಗಿ ನೋಡಿದ. ತಿಂಗಳ ಬೆಳಕು ಮಿರಿಯಲ್ಲನ ಮುಖದಮೇಲೆ ಬಿದ್ದಿತ್ತು. ಆ ಪ್ರಶಾಂತವಾದ ಮುಖ, ಸ್ಫಟಿಕದಂತೆ ಶುಭ್ರವಾದ ಕೇಶಗುಚ್ಛ, ನಿದ್ರೆಯಲ್ಲಿಯೂ ಎದ್ದುತೋರುತ್ತಿದ್ದ ಎಳೆನಗು – ಇವುಗಳನ್ನು ಕಂಡೊಡನೆ ಯಾರಿಗಾದರೂ ಮನಸ್ಸಿನಲ್ಲಿ ಅಪೂರ್ವ ಪೂಜ್ಯಭಾವ ವೊಂದು ಉದಯುವಾಗುವುದರಲ್ಲಿ ಸಂಶಯುವಿಲ್ಲ. ಷಾನನು ಒಂದು ಕ್ಷಣ ಅಪ್ರತಿಭನಾಗಿ ಈ ದೃಶ್ಯವನ್ನು ನೋಡುತ್ತ ನಿಂತ. ಇಂತಹ ದೃಶ್ಯ ವನ್ನು ಅವನು ಎಂದೂ ಕಂಡಿರಲಿಲ್ಲ. ಮೊದಲೇ ತಳಮಳಗುಟ್ಟು ತ್ತಿದ್ದ ಮನಸ್ಸಿನಲ್ಲಿ ತುಯ್ದಾಟವು ಇನ್ನೂ ಹೆಚ್ಚಾಯಿತು. ಅನ್ನದಾತ ನಿಗೆ ಕೆಡಕನ್ನುಂಟುಮಾಡಲು, ಕಬ್ಬಿಣದ ತುಂಡನ್ನು ಹಿಡಿದುಕೊಂಡು ಸಿದ್ಧನಾಗಿ ಈ ನರಪಿಶಾಚನು ಕತ್ತಲ ಮರೆಯಲ್ಲಿ ನಿಂತಿದ್ದಾನೆ; [illegible]ಷ್ಟ ಚಂದ್ರಕಾಂತಿಯಲ್ಲಿ ಆತ್ಮೀಯ ಜ್ಯೋತಿಯನ್ನೂ ಶಾಂತಿ ಯನ್ನೂ ಹೊರಸೂಸುವ ಮುಖಮುದ್ರೆಯಿಂದ ಕೂಡಿ ಆ ದೇವ ಸಮಾನ ಪುರುಷನು ಮಲಗಿದ್ದಾನೆ. ಧರ್ಮಾಧರ್ಮದ ವಿಮರ್ಶೆಯು ಗೊಂದಲದ ಪ್ರಪಂಚದಲ್ಲಿ ಇದಕ್ಕಿಂತ ಅರ್ಥವತ್ತಾದ ದೃಶ್ಯವು ಸಿಗು ವುದು ಅಸಾಧ್ಯ; ಧರ್ಮಾಧರ್ಮ ವಿಚಾರ ಜ್ಞಾನರಹಿತ ಜೀವವೊಂದು ಪಾಪಕಾರ್ಯಮಾಡಲು ಸಿದ್ಧವಾಗಿ ಒಂದು ಕಡೆ ನಿಂತು ಪ್ರಾಮಾಣಿಕ ಮನುಷ್ಯನೊಬ್ಬನ ಸುಖನಿದ್ರೆಯನ್ನು ಈಕ್ಷಿಸುತ್ತಿದೆ.

ಮಿರಿಯಲ್ಲನು ಮಲಗಿದ್ದ ಮಂಚದ ಪಕ್ಕದ ಗೋಡೆಯಲ್ಲಿ ಶಿಲುಬೆಯೊಂದನ್ನು ನೇತುಹಾಕಿದ್ದರು. ಬೆಳದಿಂಗಳ ಮಬ್ಬಿನಲ್ಲಿ, ಅದು ಒಂದು ಕೈಯಿಂದ ಒಬ್ಬನಿಗೆ ರಕ್ಷಣೆಯನ್ನೂ ಮತ್ತೊಬ್ಬನಿಗೆ ಕ್ಷಮೆಯನ್ನೂ ನೀಡುವಂತೆ ತೋರುತ್ತಿತ್ತು. ಹಠಾತ್ತಾಗಿ, ಷಾನನು ನೆಲದಮೇಲೆ ಬಿದ್ದಿದ್ದ ಅವನ ಕುಲಾವಿಯನ್ನು ಹಾಕಿಕೊಂಡು, ಆ ಕೊಠಡಿಯ ಇನ್ನೊಂದು ಗೋಡೆಯ ಬೀರುವಿನ ಕಡೆಗೆ ಹೋದ. ಆ ಬೀರುವಿಗೆ ಬೀಗವನ್ನು ಹಾಕಿರಲಿಲ್ಲವಾಗಿ ತನ್ನ ಕೈಯಲ್ಲಿದ್ದ ಕಬ್ಬಿಣದ ಸರಳನ್ನು ಉಪಯೋಗಿಸಬೇಕಾಗಲಿಲ್ಲ. ಬಾಗಿಲು ತೆಗೆದು ಒಳಗಿದ್ದ

ಬೆಳ್ಳಿಯ ಸಾಮಾನುಗಳನ್ನಿಟ್ಟಿದ್ದ ಬುಟ್ಟಿಯನ್ನು ತೆಗೆದುಕೊಂಡು, ತಾನು ಮಲಗಿದ್ದ ಕೊಠಡಿಗೆ ಬಂದು, ಅಲ್ಲಿದ್ದ ತನ್ನ ಗಂಟನ್ನೂ ಕೋಲನ್ನೂ ತೆಗೆದುಕೊಂಡು ಕಿಟಿಕಿಯಿಂದ ಮನೆಯ ಹಿಂಭಾಗದ ಹೂದೋಟಕ್ಕೆ ಇಳಿದು, ಅಲ್ಲಿ ಬೆಳ್ಳಿಯ ಸಾಮಾನುಗಳನ್ನು ತನ್ನ ಗಂಟೊಳಗೆ ಸೇರಿಸಿ, ಬುಟ್ಟಿಯನ್ನು ಬಿಸುಟು, ಒಂದೇ ನೆಗತದಲ್ಲಿ ತೋಟದ ಸುತ್ತುಗೋಡೆಯನ್ನು ಹತ್ತಿ ಹಾರಿ, ಹೊರಗಿನ ಮರಗಳ ಮಧ್ಯದಲ್ಲಿ ಅದೃಶ್ಯನಾದ.

ಮರುದಿನ ಬೆಳಗ್ಗೆ ಮಿರಿಯಲ್ಲನು ಹೂದೋಟದಲ್ಲಿ ಓಡಾಡುತ್ತಿದ್ದಾಗ, ಅಡಿಗೆಯ ಹೆಂಗುಸು ಓಡುತ್ತ ಬಂದು, "ಸ್ವಾಮಿಾ! ಬೆಳ್ಳಿ ಸಾಮಾನಿನ ಬುಟ್ಟಿಯನ್ನು ನೀವೇನಾದರೂ ಕಂಡಿರಾ?" ಎಂದು ಕೇಳಿದಳು.

"ಹೂಂ! ಕಂಡಿದ್ದೇನೆ" ಎಂದ ಮಿರಿಯಲ್.

"ಸಧ್ಯಃ, ಬದುಕಿದೆ. ಏನಾಗಿಹೋಯಿತೋ ಎಂದು ಭಯವಾಗಿತ್ತು."

"ಇಗೋ! ಇಲ್ಲಿಯೇ ಬಿದ್ದಿತ್ತು"—ಹೀಗೆಂದು ಮಿರಿಯಲ್ಲನು ಹೂವಿನ ಪಾತಿಯಮೇಲೆ ಬಿದ್ದಿದ್ದ ಬುಟ್ಟಿಯನ್ನು ಎತ್ತಿಕೊಟ್ಟನು.

"ಇದು ಏನೂಂದ್ರೆ? ಬೆಳ್ಳಿಯ ಪಾತ್ರೆಗಳೆಲ್ಲಾ ಎಲ್ಲಿ ಅಂತ ಕೇಳಿದೆ ನಾನು" ಎಂದಳು ಅಡಿಗೆಯವಳು.

"ಓಹೋ! ಅವೇ? ಅವೇನಾದುವೋ ಗೊತ್ತಿಲ್ಲ."

"ಅಯ್ಯೋ ದೇವರೆ! ನನಗೆ ಗೊತ್ತಿತ್ತು. ಅವನೇ ಕಳ್ಳನಾಗಿರಬೇಕು" ಎಂದು ಕೂಗುತ್ತಾ ಅಡಿಗೆಯ ಹೆಂಗುಸು ಮನೆಯೊಳಕ್ಕೆ ಓಡಿಹೋಗಿ, ಮರುಕ್ಷಣದಲ್ಲಿಯೇ ಹಿಂದಿರುಗಿ ಬಂದು,—"ಅವನು ಎಲ್ಲಿಯೂ ಇಲ್ಲ, ಓಡಿಹೋಗಿರಬೇಕು. ಬೆಳ್ಳಿಯ ಸಾಮಾನುಗಳೆಲ್ಲವನ್ನೂ ಕದ್ದಿದ್ದಾನೆ. ಆ ಮನೆಹಾಳ ಎಲ್ಲಿ ಹೋದನೋ ಅದೂ ಗೊತ್ತಿಲ್ಲ" ಎಂದಳು.

ಹೂವಿನ ಪಾತಿಯನ್ನು ಸರಿಮಾಡುತ್ತ, ಬಗ್ಗಿ ಕೆಲಸಮಾಡುತ್ತಿದ್ದ ಮಿರಿಯಲ್ ಎದ್ದುನಿಂತು, "ಅಗೋ, ಅವನು ಗೋಡೆಯನ್ನು

ಇಲ್ಲಿ ಹಾರಿಹೋಗಿದ್ದಾನೆ. ಗುರುತು ಕಾಣುತ್ತಿದೆ. ಅಲ್ಲದೆ, ಇನ್ನೊಂದು ವಿಷಯ – ಆ ಸಾಮಾನುಗಳೆಲ್ಲ ನಮ್ಮದೇ ಎಂತಲೂ ಹೇಳುವುದೂ ಸರಿಯಲ್ಲ" ಎಂದು ನಿಧಾನವಾಗಿ ಹೇಳಿದನು.

ಅಡಿಗೆಯ ಹೆಂಗುಸಿಗೆ ಏನೊಂದೂ ಅರ್ಥವಾಗಲಿಲ್ಲ. ಸುಮ್ಮನೆ ಅವಾಕ್ಕಾಗಿ ನೋಡುತ್ತ ನಿಂತುಬಿಟ್ಟಳು. ಒಂದೆರಡು ನಿಮಿಷಾನಂತರ ಮಿರಿಯಲ್ಲನೆಂದ – "ಆ ಸಾಮಾನುಗಳ ಅವಶ್ಯವು ಯಾರಿಗೆ ಹೆಚ್ಚಾಗಿತ್ತೋ ಅಂತಹ ಬಡಬಗ್ಗರಿಗೆ ಸಿಗಗೊಡದೆ ನಾನು ಇಟ್ಟುಕೊಂಡಿದ್ದೆ. ಆ ಮನುಷ್ಯ ಯಾರು ಎನ್ನುವಿರಿ? – ಬಡವ. ಬಡವರ ವಸ್ತು ಬಡವನಿಗೆ ಸೇರಿತು."

"ಹೀಗಾದರೆ ದೇವರೇ ಗತಿ. ಇನ್ನು ನೀವು ಯಾವುದರಲ್ಲಿ ಊಟಮಾಡುತ್ತೀರಿ? ಬಡಿಸುವುದಕ್ಕೂ ಸರಿಯಾದ ಪಾತ್ರೆಗಳಿಲ್ಲ. ಇದ್ದಿದ್ದನ್ನೆಲ್ಲಾ ಹೀಗೆ ದಾನಮಾಡುವವರನ್ನು ನಾನು ಎಲ್ಲಿಯೂ ಕಂಡಿಲ್ಲ" ಎಂದಳು ಅಡಿಗೆಯವಳು.

"ಹಾಗಲ್ಲಮ್ಮಾ! ಊಟಮಾಡುವುದಕ್ಕೆ ಬೆಳ್ಳಿಯ ಪಾತ್ರೆಗಳೇ ಆಗಬೇಕೆ? ಹಿತ್ತಾಳೆ ತಾಮ್ರ ಇಲ್ಲವೇ? ಅದೂ ಇಲ್ಲದಿದ್ದರೆ, ಮಣ್ಣಿನ ಮಡಕೆ ತಟ್ಟೆಗಳಿವೆಯಲ್ಲ. ಇದಕ್ಕೇಕೆ ಯೋಚನೆ?" ಎಂದನು ಮಿರಿಯಲ್.

ಸ್ವಲ್ಪ ಹೊತ್ತಾದಮೇಲೆ, ಮಿರಿಯಲ್ಲನು ಮನೆಯ ಹಜಾರದಲ್ಲಿ ಕುಳಿತಿದ್ದನು. ಆಗ ಹೊರಗಡೆ ಯಾರೋ ಬಾಗಿಲು ತಟ್ಟಿದಂತಾಯಿತು. ಅಡಿಗೆಯ ಹೆಂಗುಸು ಬಾಗಿಲು ತೆಗೆದಳು. ಬಂದವರು ಯಾರೆಂದು ನೋಡಲು ಮಿರಿಯಲ್ಲನ ತಂಗಿ ಒಳಗಿನಿಂದ ಬಂದಳು.

"ಒಳಗೆ ಬನ್ನಿ" ಎಂದನು ಮಿರಿಯಲ್.

ಹೊರಗಡೆ ಒಂದು ವಿಚಿತ್ರವಾದ ಗುಂಪು; ಮೂವರು ಪೋಲೀಸಿನವರು ಹಿಡಿದು ಮುಂದಕ್ಕೆ ತಳ್ಳುತ್ತಾ ಒಬ್ಬ ಮನುಷ್ಯನನ್ನು ಒಳಕ್ಕೆ ದಬ್ಬಿದರು. ಆ ಮನುಷ್ಯ – ಷಾನ್ ವಲ್ ಷಾನ್. ಒಳಗೆಲ್ಲರೂ ಬಂದಮೇಲೆ, ಪೋಲೀಸು ಅಧಿಕಾರಿಯು ಮುಂದೆ ಬಂದು ಬಿಷಪ್ಪನನ್ನು ನಮಸ್ಕರಿಸಿ, "ಮಹಾಸ್ವಾಮಿ!" ಎಂದು ಏನನ್ನೊ ಹೇಳುವುದಕ್ಕೆ

ಪ್ರಾರಂಭಿಸಿದನು. ವಿಷಯವೆಲ್ಲವನ್ನೂ ಒಂದು ಕ್ಷಣದಲ್ಲಿ ಮನ ಗಂಡು, ಮಿರಿಯಲ್ಲನು ಸಡಗರದಿಂದ ಷಾನನ ಸಮೀಪಕ್ಕೆ ಬಂದು, "ಅಲ್ಲವಯ್ಯಾ! ಆ ಎರಡು ದೀಪದ ಕಂಬಗಳನ್ನು ನಾನು ಕೊಡ ಲಿಲ್ಲವೇ ನಿಮಗೆ? ಅವನ್ನೇಕೆ ತೆಗೆದುಕೊಂಡು ಹೋಗುವುದನ್ನು ಮರೆತಿರಿ" ಎಂದು ಕೇಳಿದನು.

ಷಾನನಿಗೆ ಏನೊಂದೂ ಅರ್ಥವಾಗದೆ ಅಲ್ಲಿ ಇಲ್ಲಿ ನೋಡುತ್ತ ನಿಂತನು. ಪೋಲೀಸ ಅಧಿಕಾರಿಯು ಆಗ ಹೇಳಿದನು "ಮಹಾ ಸ್ವಾಮಿ, ಹಾಗಾದರೆ ಇವನು ಹೇಳಿದುದು ನಿಜ? ನಾವು ಕಂಡೊಡನೆ ಇವನು ಓಡುವುದಕ್ಕೆ ಪ್ರಾರಂಭಿಸಿದ. ಅನುಮಾನದ ಮೇಲೆ ಹಿಡಿ ದೆವು. ಆಗ ಇವನಲ್ಲಿ ಈ ಸಾಮಾನುಗಳಿದ್ದುವು. ಕೇಳಿದ್ದಕ್ಕೆ...."

"ನಿನ್ನೆ ರಾತ್ರಿ ಮಲಗಿದ್ದ ಮನೆಯ ಮುದುಕ ಇವುಗಳನ್ನು ಕೊಟ್ಟ" ಎಂತ ಇವರು ಹೇಳಿರಬೇಕು – ಅಲ್ಲವೇ? ನೀವು ಮಾಡಿ ದುದು ತಪ್ಪು" ಎಂದನು ಮಿರಿಯಲ್.

"ತಪ್ಪಾಯಿತು, ಮಹಾಸ್ವಾಮಿ! ಹಾಗಾದರೆ ಇವನನ್ನು – ಇವರನ್ನು – ಬಿಟ್ಟುಬಿಡೋಣವೇ?" ಪೋಲೀಸು ಅಧಿಕಾರಿ ಕೇಳಿದ.

"ಹೌದು."

ಪೋಲೀಸಿನವರು ಷಾನನನ್ನು ಬಿಟ್ಟು ಹಿಂದಕ್ಕೆ ಸರಿದು, ಬಿಷಪ್ಪ ನಿಗೆ ನಮಸ್ಕರಿಸಿ ಹೊರಟುಹೋದರು. ಆಗ ಷಾನನು ನಿದ್ರೆಯಿಂದೆ ಚ್ಚೆತ್ತವನಂತೆ – "ಇದು ನಿಜವೇ? ನನ್ನನ್ನು ಬಿಟ್ಟುಬಿಟ್ಟರೋ? ನಾನು ಹೋಗಬಹುದೇ?" ಎಂದು ಕೂಗಿದನು.

ಮಿರಿಯಲ್ಲನು "ನೀವು ನಿಮ್ಮ ದಾರಿ ಹೋಗಿ—ಯಾರದೂ ತಂಟೆ ಯಿಲ್ಲ. ಹೊರಡುವುದಕ್ಕೆ ಮುಂಚೆ ಆ ಎರಡು ಕಂಬಗಳನ್ನೂ ತೆಗೆದು ಕೊಂಡುಹೋಗಿ. ಸ್ವಲ್ಪ ತಾಳಿ" ಎಂದು ಒಳಕ್ಕೆ ಹೋಗಿ ಬೆಳ್ಳಿಯ ದೀಪದ ಕಂಬಗಳನ್ನು ಷಾನನ ಕೈಗೆ ಕೊಟ್ಟು, "ಸುಖವಾಗಿ ಹೋಗಿ ಬನ್ನಿ. ಆದರೆ ನೋಡಿ, ಬಾಗಿಲಿನಿಂದಲೇ ಓಡಾಡಬಹುದು. ಹೂವಿನ ಪಾತಿಗಳನ್ನು ತುಳಿಯುವ ಅವಶ್ಯಕತೆಯೇ ಇಲ್ಲ" ಎಂದನು.

ಷಾನನು ಮೂರ್ಛೆಹೋಗುವವನಂತೆ ತೂರಾಡಿದನು. ಮಿರಿಯಲ್ಲನು ಅವನ ಭುಜಗಳೆರಡರಮೇಲೆ ಕೈಗಳನ್ನಿಟ್ಟು, ಅಪೂರ್ವ ಶೋಭೆಯಿಂದ ಕೂಡಿದ ಕಣ್ಣುಗಳಿಂದ ಅವನನ್ನು ದಿಟ್ಟಿಸಿ ನೋಡುತ್ತ—ನಿಧಾನವಾಗಿ, ಮೆತ್ತಗೆ –

"ಈ ಹಣದಿಂದ ಇನ್ನುಮುಂದೆ ಧರ್ಮಮಾರ್ಗದಲ್ಲಿಯೇ ನಡೆಯುತ್ತೇನೆಂದು ನೀವು ಪ್ರಮಾಣಮಾಡಿರುವುದನ್ನು ಮರೆಯಬೇಡಿ" ಎಂದನು.

ಹೀಗೆಲ್ಲಾ ಪ್ರಮಾಣ ಮಾಡಿದುದೊಂದೂ ಷಾನನ ಜ್ಞಾಪಕಕ್ಕೆ ಬರಲಿಲ್ಲ; ಅವನು ಯಾವುದೋ ಅಜಾಗ್ರದವಸ್ಥೆಯಲ್ಲಿದ್ದವನಂತೆ ನಿಂತಿದ್ದ.

"ಅಪ್ಪಾ! ಷಾನ್ ವಲ್ ಷಾನ್—ನನ್ನ ತಮ್ಮನೇ! ಈಗಿನಿಂದ ನೀನು ಅಧರ್ಮದ ಸೆರೆಯಾಳಲ್ಲ; ಧರ್ಮದ ದಾಸ. ನಿನ್ನ ಆತ್ಮವನ್ನು ನಾನು ಕೊಂಡುಕೊಂಡಿದ್ದೇನೆ. ಕೆಟ್ಟ ಯೋಚನೆಗಳಿಂದಲೂ ಪಾಪ ಪ್ರಯತ್ನಗಳಿಂದಲೂ ಹೊರಕ್ಕೆಳೆದು, ಅದನ್ನು ಭಗವಂತನ ವಶ ಮಾಡಿದ್ದೇನೆ" ಎಂದ ಮಿರಿಯಲ್.

ಮೌನದಿಂದ ತಲೆಬಾಗಿ ಷಾನನು ಹೊರಟುಹೋದನು.

ಆಗಲೇ ಸಾಯಂಕಾಲ ಸಮೀಪಿಸಿತು; ಬೆಳಗಿನಿಂದಲೂ, ಏನನ್ನೂ ತಿಂದಿರದಿದ್ದರೂ ಷಾನನಿಗೆ ಹಸಿವೇ ಆಗಲಿಲ್ಲ. ಬೆಳಗಿನಿಂದ ಓಡಾಡುತ್ತಲೇ ಇದ್ದರೂ ದಣಿವಾಗಿರಲಿಲ್ಲ. ಅವನ ಮನಸ್ಸಿನಲ್ಲಿ ನಾನಾತರಹದ ಯೋಚನೆಗಳು. ಒಂದೊಂದು ಸಲ ಅಪೂರ್ವವಾದ ಪವಿತ್ರಭಾವನೆಯೊಂದು ಅವನ ಮನಸ್ಸನ್ನೆಲ್ಲಾ ತುಂಬುತ್ತಿತ್ತು; ಇಪ್ಪತ್ತು ವರ್ಷಗಳ ಅನುಭವ ಕಾಠಿಣ್ಯವೂ ಅದನ್ನು ಮನಸ್ಸಿನಿಂದ ಸಂಪೂರ್ಣವಾಗಿ ಓಡಿಸಲು ಆಗಲಿಲ್ಲ. ಆ ಭಾವನೆಯೊಡನೆ ಸಂಕಟವೂ ದೈವಭಕ್ತಿಯೂ ಬೆರತುಬರುತ್ತಿದ್ದವು. ಆದರೆ ಅವುಗಳೆಲ್ಲದರ ಸ್ವರೂಪವು ಷಾನನಿಗೆ ಗೊತ್ತಾಯಿತೆಂದು ಹೇಳಲಾಗುವುದಿಲ್ಲ. ದಿನವೆಲ್ಲಾ ಮನಸ್ಸಿನಲ್ಲಿ ಹೀಗೆ ಅಶಾಂತಿಯೇ ತುಂಬಿತ್ತು.

ಸಾಯಂಕಾಲದ ಹೊತ್ತಿನಲ್ಲಿ, ದಾರಿ ನಡೆದು ಬಳಲಿದ್ದ ಷಾನನು ಒಂದು ಮೈದಾನದಲ್ಲಿ ದಾರಿಯ ಪಕ್ಕದಲ್ಲಿ ಕುಳಿತಿದ್ದ. ಬೆಳಗಿನಿಂದ ಸುಮಾರು ಹನ್ನೆರಡು ಮೈಲಿ ನಡೆದಿರಬಹುದು. ಯೋಚನಾಮಗ್ನನಾಗಿ ಅವನು ಹೀಗೆ ಕುಳಿತಿದ್ದಾಗ, ಹರ್ಷವನ್ನು ಸೂಸುತ್ತಿರುವ ಹಾಡೊಂದು ಅವನ ಕಿವಿಗೆ ಬಿತ್ತು. ಮನೆ ಮನೆಯ ಹೊಗೆ ಕೊಳವಿಗಳನ್ನು ಗುಡಿಸಿ, ಊರಿಂದ ಊರಿಗೆ ಓಡಾಡುತ್ತಿರುವ ಬಾಲಕನೊಬ್ಬ, ಹಾಡುತ್ತ ಬರುತ್ತಿದ್ದ. ಹಾಡುತ್ತ ಹಾಡುತ್ತ ಆ ಹುಡುಗ, ಕೈಯಿಂದ ರೂಪಾಯೊಂದನ್ನು ಮೇಲಕ್ಕೆ ಎಸೆಯುತ್ತಲೂ, ಅದು ನೆಲಕ್ಕೆ ಬೀಳುವುದರೊಳಗಾಗಿ ಹಿಡಿದುಕೊಳ್ಳುತ್ತಲೂ, ತನ್ನಷ್ಟಕ್ಕೆ ತಾನೇ ಆಟವಾಡುತ್ತ ಬರುತ್ತಿದ್ದ. ಆ ಹುಡುಗ ಷಾನನು ಕುಳಿತಿದ್ದ ಬಳಿಗೆ ಬಂದಾಗಲೂ ರೂಪಾಯಿನ ಆಟವನ್ನು ಆಡುತ್ತಿದ್ದ. ಆದರೆ ಈಸಲ ಆಕಸ್ಮಾತ್ತಾಗಿ, ಕೆಳಗೆ ಬೀಳುತ್ತಿದ್ದ ರೂಪಾಯನ್ನು ಹಿಡಿಯಲು ಆಗಲಿಲ್ಲ. ರೂಪಾಯಿ ಉರುಳಿ ಷಾನನ ಕಾಲಿನ ಕಡೆ ಹರಿಯಿತು. ಅರೆಗಣ್ಣು ಮುಚ್ಚಿ ಕುಳಿತಿದ್ದ ಷಾನನು, ನೋಡದೆಯೇ ಅದರಮೇಲೆ ತನ್ನ ಅಡಿಯನ್ನು ಇಟ್ಟ. ಹುಡುಗನು ಅದನ್ನು ನೋಡಿ, ಷಾನನ ಬಳಿಗೆ ಬಂದು,—

"ಸ್ವಾಮಿ, ನನ್ನ ರೂಪಾಯಿ !" ಎಂದ.

"ಆ, ಏನು ? ನಿನ್ನ ಹೆಸರೇನೋ ಹುಡುಗ ?" ಎಂದ ಷಾನ್.

"ನನ್ನ ಹೆಸರು ಪುಟ್ಟ ಗೆರ್ವೆ, ಸ್ವಾಮಿ."

"ಹೋಗು, ದಾರಿ ಹಿಡಿದುಕೊಂಡು."

"ನನ್ನ ರೂಪಾಯಿ ಕೊಡಿ, ಸ್ವಾಮಿ. ನನ್ನ ರೂಪಾಯಿ— ಅದೊಂದೇ ನನ್ನ ಬಳಿಯಿರುವುದರಲ್ಲಿ ಬೆಳ್ಳಿಯದು" ಎಂದು ಗೆರ್ವೆ ಷಾನನನ್ನು ಹಿಡಿದು ಅಲುಗಾಡಿಸಲು ಪ್ರಯತ್ನಿಸಿದ. ಷಾನನು ಪುನಃ ತಲೆಯನ್ನು ತಗ್ಗಿಸಿದವ ಎತ್ತಲಿಲ್ಲ. ಗೆರ್ವೆಯು ಅಳಲು ಪ್ರಾರಂಭಿಸಿದ. ಆಗ ಷಾನನು, ತಲೆಯೆತ್ತಿ ಗೆರ್ವೆಯನ್ನು ನೋಡಿದ. ಅವನ ಕಣ್ಣುಗಳೂ ತೊಯ್ದಿದ್ದವು. ಅವನಿಗೆ ಏನೊಂದೂ ಅರ್ಥವಾದಂತೆ ತೋರಲಿಲ್ಲ. ಅವನು—

"ಯಾರು ನೀನು ?" ಎಂದು ಗೆರ್ವೆಯನ್ನು ಕೇಳಿದ.

"ನಾನು ಸ್ವಾಮಿ. ಪುಟ್ಟ ಗೆರ್ವೆ. ನನ್ನ ರೂಪಾಯಿ ಕೊಡಿ, ಸ್ವಾಮಿ. ನಿಮ್ಮ ಕಾಲಕೆಳಗಿದೆ."

ಷಾನನು ಪುನಃ ತಲೆಬಗ್ಗಿಸಿ ಕುಳಿತಿದ್ದ.

"ಏ ! ರೂಪಾಯಿ ಕೊಡುತ್ತೀಯೋ ಇಲ್ಲವೋ ? ನಿನ್ನ ಕಾಲ ಕೆಳಗಿದೆ" ಎಂದು ಗೆರ್ವೆ ಕೂಗಿದ.

ಷಾನನು ನಿದ್ರೆಯಿಂದ ಎಚ್ಚತ್ತವನಂತೆ ಎದ್ದು—"ಹಾ ! ಇನ್ನೂ ನೀನು ಇಲ್ಲಿಯೇ ಇದ್ದೀಯಾ? ಹೊರಡು—ಓಡು" ಎಂದು ಕೂಗುತ್ತ, ಒಂದುಸಲ ಕೈಲಿದ್ದ ಕೋಲನ್ನು ಬೀಸಿದ. ಗೆರ್ವೆಯು ಗಡಗಡನೆ ನಡುಗುತ್ತ ನಿಂತಿದ್ದು, ಮರು ಕ್ಷಣದಲ್ಲಿಯೇ, ಹಿಂದಿರುಗಿ ಕೂಡ ನೋಡದೆ, ಒಂದೇ ಉಸಿರಿನಲ್ಲಿ ಓಡಿಹೋದ. ಇಷ್ಟರಲ್ಲಿ ಸಾಯಂ ಕಾಲವು ಕಳೆದು ರಾತ್ರಿ ಪ್ರಾರಂಭವಾಗಿತ್ತು, ಸೂರ್ಯನು ಆಗಲೇ ಮುಳುಗಿದ್ದ.

ಷಾನನು ತಟಕ್ಕನೆ ಮೇಲಕ್ಕೆದ್ದ, ಅವನಿಗೆ ಚಳಿಯಾಗಿರಬೇಕು. ಮುಂದಕ್ಕೆ ಒಂದು ಹೆಜ್ಜೆ ಇಟ್ಟು, ನೆಲದಮೇಲಿದ್ದ ತನ್ನ ಗಂಟನ್ನು ಎತ್ತಿಕೊಳ್ಳಲು ಬಗ್ಗಿದ. ಈಗ ಅವನ ಕಣ್ಣಿಗೆ ರೂಪಾಯಿ ಬಿದ್ದಿತು. ಅದನ್ನು ಕಂಡೊಡನೆಯೇ, ಅವನ ದೇಹದಲ್ಲಿ ವಿದ್ಯುಚ್ಛಕ್ತಿಯು ಪ್ರವಹಿಸಿದಂತಾಯಿತು. "ಇದೇನಿದು ?" ಎಂದು ಷಾನನು ಮೂರು ಹೆಜ್ಜೆ ಹಿಂದೆ ಸರಿದು ರೂಪಾಯಿಯನ್ನು ದೃಷ್ಟಿಸಿ ನೋಡಿದ. ನೋಡು ತ್ತಿದ್ದವನು ಹಾಗೆಯೇ ಬಗ್ಗಿ ಅದನ್ನು ತೆಗೆದುಕೊಂಡು ನೋಡುತ್ತ ನಿಂತ. ಹಾಗೆಯೇ, ದಾರಿತಪ್ಪಿ ಭಯಗ್ರಸ್ಥವಾದ ಹರಿಣವ್ಯಗದಂತೆ ಗಡಗಡನೆ ನಡುಗುವುದಕ್ಕೆ ಪ್ರಾರಂಭಿಸಿದ.

ಬಲ ಅಂಗೈಯಲ್ಲಿ ರೂಪಾಯನ್ನು ಇಟ್ಟುಕೊಂಡು, ಆ ಹುಡು ಗನು ಹೋದ ದಾರಿಯಲ್ಲಿಯೇ ಸುಮಾರು ಮೂವತ್ತು ಮಾರು ಹೋದ. ಅಲ್ಲಿ ನಿಂತು—ಗಟ್ಟಿಯಾಗಿ, 'ಗೆರ್ವೆ, ಪುಟ್ಟ ಗೆರ್ವೆ' ಎಂದು ಕೂಗಿದ. ಎಷ್ಟು ಕೂಗಿದರೂ ಗೆರ್ವೆಯಿಲ್ಲ. ಅವನು ಮುಂದಕ್ಕೆ ನಡೆಯುತ್ತ ಕೂಗು ಹಾಕಿದ. ಅದಕ್ಕೂ ಉತ್ತರವಿಲ್ಲ. ಅದೇ

ದಾರಿಯಲ್ಲಿ ಓಡಲು ಪ್ರಾರಂಭಿಸಿದ.—ಹಾಗೆಯೇ, "ಗೆರ್ವೈ, ಪುಟ್ಟ ಗೆರ್ವೈ, ಎಲ್ಲಿದ್ದೀಯಾ ?" ಎಂದು ಕೂಗಿದ. "ಇದ್ದೀಯಾ ?" ಎಂಬ ಪ್ರತಿಧ್ವನಿ ಮಾತ್ರ ಬಂತು.

ಇನ್ನೂ ಓಡಿದ. ಓಡುತ್ತ ಓಡುತ್ತ ಅಳಲು ಪ್ರಾರಂಭಿಸಿದ. "ಗೆರ್ವೈ, ಪುಟ್ಟ ಗೆರ್ವೈ! ಬಾರೋ—ಬಾ ಅಪ್ಪ. ನಿನ್ನ ರೂಪಾಯಿ ತೆಗೆದುಕೋ! ಗೆರ್ವೈ, ಪುಟ್ಟ ಗೆರ್ವೈ, ಬಾರೋ" ಎಂದು ಗೋಳಿಟ್ಟ. ಓಡಿ ಓಡಿ ಸಾಕಾಗಿ ನೆಲದಮೇಲೆ ಕುಳಿತುಕೊಂಡು ಅತ್ತ. ಬಹಳ ಹೊತ್ತಿನವರೆಗೆ, ಷಾನನು ಹೀಗೆ ಎದೆ ಬಿರಿಯುವಂತೆ ಅತ್ತ. ಸ್ತ್ರೀಯರಿಗಿಂತ ಅಬಲನಾಗಿ, ಮಕ್ಕಳಿಗಿಂತ ಭಯಕ್ಕೊಳಗಾಗಿ, ಬಿಕ್ಕಿ ಬಿಕ್ಕಿ ಅತ್ತ. ಹಾಗೆ ಅಳುತ್ತಿದ್ದಂತೆಯೇ ಅವನ ಮನಸ್ಸಿನಲ್ಲಿ ಅದ್ಭುತವಾದ ಪ್ರಭೆಯೊಂದು ಮೂಡಿತು. ತನ್ನ ಇದುವರೆಗಿನ ಜೀವನ, ಮೊದಲನೆಯ ಅಪರಾಧ, ಅದಕ್ಕಾಗಿ ಅನುಭವಿಸಿದ ಹತ್ತೊಂಬತ್ತು ವರ್ಷದ ಸೆರೆಮನೆಯ ವಾಸ, ಮೃಗಾವಸ್ಥೆಗೆ ಬಂದ ದೇಹ, ಶಿಲಾವಸ್ಥೆಗೆ ಮಾರ್ಪಟ್ಟ ಮನಸ್ಸು, ಸಮಾಜದ ಮೇಲೆ ಸೇಡು ತೀರಿಸಿಕೊಳ್ಳಬೇಕೆಂಬ ರಾಕ್ಷಸೀ ಮನೋವೃತ್ತಿ, ಮಿರಿಯಲ್ಲನ ಮನೆಯಲ್ಲಿ ನಡೆದುದು, ಕೊನೆಗೆ ಗೆರ್ವೈಯನ್ನು ದರೋಡೆ ಮಾಡಿದುದು—ಮಿರಿಯಲ್ಲನ ದಯೆಯನ್ನು ಕಂಡಮೇಲೆಯೂ ನಡೆಸಿದುದರಿಂದ ಇನ್ನೂ ಕ್ರೂರತಮ ಕೃತ್ಯವಾದ ದರೋಡೆ—ಇವೆಲ್ಲವೂ ಪುನಃ ಅವನ ಚಿತ್ತಭಿತ್ತಿಯ ಮೇಲೆ ಚಿತ್ರಗಳಂತೆ ಬಂದು ಮಾಯವಾದುವು. ಆದರೆ ಈಗ ಆ ದೃಶ್ಯಗಳಿಗೆ ಬೇರೆಯದೇ ಆದ ಅರ್ಥವೊಂದು ಅವನ ಮನಸ್ಸಿಗೆ ತೋರಿತು. ಆ ಅಪೂರ್ವ ಪ್ರಭೆಯ ಬೆಳಕಿನಲ್ಲಿ ಈ ಅನುಭವಗಳ ಅರ್ಥವೇ ಬೇರೆಯಾಯಿತು. ತನ್ನ ಜೀವನವನ್ನು ನೋಡಿದ—ಅದೊಂದು ಅಂಧಕಾರಮಯ ಪಾಪಕೂಪವೆಂದು ತೋರಿತು; ತನ್ನ ಆತ್ಮವನ್ನು ನೋಡಿದ—ಅದೊಂದು ಘೋರಾಕೃತಿಯ ಕರಾಳ ಮೂರ್ತಿಯಾಗಿತ್ತು. ಆದರೂ ಅವೆರಡರ ಮೇಲೆಯೂ ಆ ಅಪೂರ್ವ ಶೋಭೆಯು ಬಿದ್ದಿತ್ತು. ಧರ್ಮದ ಬೆಳಕಿನಲ್ಲಿ ಅಧರ್ಮದ ಕರಾಳ ರೂಪವನ್ನು ಕಂಡಂತೆ ಷಾನನು ಭಾವಿಸಿದ.

ಅವನು ಎಷ್ಟು ಹೊತ್ತು ಅತ್ತನೋ, ಆಮೇಲೆ ಏನುಮಾಡಿದನೋ, ಎಲ್ಲಿಗೆ ಹೋದನೋ — ಒಂದೂ ಗೊತ್ತಿಲ್ಲ. ಆದರೆ ಅಂದು ಬೆಳಗಿನ ಜಾವ ಮೂರು ಗಂಟೆ ಸಮಯದಲ್ಲಿ ಬಿಷಪ್ ಮಿರಿಯಲ್ಲನ ಮನೆಯ ಮುಂದೆ ದಾರಿಹೋಕನೊಬ್ಬ ಮೊಣಕಾಲೂರಿ ಪ್ರಾರ್ಥಿಸುತ್ತಿದ್ದುದನ್ನು ತಾನು ಕಂಡೆನೆಂದು, ಆ ಹಳ್ಳಿಗೆ ಬರುವ ಟಪಾಲು ಗಾಡಿಯವನು ಮುಂದೆ ಎಂದೋ ಒಂದು ದಿನ ಹೇಳಿದನಂತೆ !

## ಮೂರನೆಯ ಪರಿಚ್ಛೇದ

ಪ್ಯಾರಿಸ್ ಪಟ್ಟಣಕ್ಕೆ ಅನತಿ ದೂರದಲ್ಲಿ ಒಂದು ಹಳ್ಳಿಯಿತ್ತು. ಪ್ಯಾರಿಸಿನಿಂದ ಉತ್ತರ ಫ್ರಾನ್ಸಿಗೆ ಹೋಗುವ ರಾಜಮಾರ್ಗದಲ್ಲಿಯೇ ಆ ಹಳ್ಳಿಯು ಇದ್ದುದರಿಂದ, ಆ ಕಡೆಗೆ ಹೋಗುವವರೆಲ್ಲರೂ ಆ ಹಳ್ಳಿಯನ್ನು ಹಾದುಹೋಗುತ್ತಿದ್ದರು. ಹೀಗೆ ಜನರು ಸದಾ ಓಡಾಡುವ ಮಾರ್ಗವಾದುದರಿಂದ ಅಲ್ಲಿ ಹೋಟಲನ್ನು ಇಡುವುದು ಲಾಭದಾಯಕವೆಂದು ಬಗೆದು ದೆ ನಾ ರ್ಡಿ ಯೆ ಎಂಬುವನೊಬ್ಬನು, ಆ ಹಳ್ಳಿಯ ಮೊದಲಲ್ಲಿಯೇ ಒಂದು ಹೋಟಲನ್ನು ಇಟ್ಟನು. ಇವನು, ದಯ ಸತ್ಯ ಮುಂತಾದ ಸದ್ಗುಣಗಳಿಗೆ ಅಪರಿಚಿತನು. ವಾಟರ್ಲೂ ಕದನವಾಗಿ ಇಂಗ್ಲಿಷರು ಫ್ರೆಂಚರನ್ನು ಸೋಲಿಸಿದ ರಾತ್ರಿ, ರಣರಂಗದಲ್ಲಿ ಬಿದ್ದಿದ್ದ ಹೆಣಗಳ ಮೈಮೇಲಿರುವ ಒಡವೆ ವಸ್ತುಗಳನ್ನೆಲ್ಲಾ ಕದಿಯಲು, ಇವನು ಆ ರಾತ್ರಿ ಅಲ್ಲಿ ಓಡಾಡುತ್ತಿದ್ದನು. ಇಂಗ್ಲಿಷರು ಫ್ರೆಂಚರನ್ನು ಸೋಲಿಸಿದರೆ, ಇವನು ಅವರಿಬ್ಬರನ್ನೂ ಸುಲಿಗೆ ಮಾಡುತ್ತಿದ್ದ ! ಹಾಗೆಯೇ ಇವನು ಅಲ್ಲಿರುವ ಹೆಣಗಳ ಬಳಿ ಸುಳಿದಾಡುತ್ತಿರುವಾಗ ಒಬ್ಬ ಸೈನ್ಯಾಧಿಕಾರಿ ಸಾಯುತ್ತ ಬಿದ್ದಿರುವುದು ಇವನಿಗೆ ಕಂಡಿತು. ಕೂಡಲೆ ಅಲ್ಲಿ ಹೋಗಿ ಆ ಅಧಿಕಾರಿಯ ಅಂಗಿಯಮೇಲಿದ್ದ ಹುದ್ದೆಯ ಪದಕವೇ ಮೊದಲಾದವುಗಳನ್ನು ತೆಗೆದು ಮುಚ್ಚಿಟ್ಟುಕೊಂಡನು. ಅವುಗಳನ್ನು ಕೀಳುವಾಗ ಅಲುಗಾಡಿಸಿದುದಕ್ಕೋ ಏನೋ, ಆ ಅಧಿಕಾರಿ ಕ್ಷೀಣ ಸ್ವರದಿಂದ, "ಯಾರು ಗೆದ್ದರು ?" ಎಂದನು.

"ಇಂಗ್ಲಿಷ್."

" ನನ್ನ ಜೇಬಿನಲ್ಲಿ ಗಡಿಯಾರ ಮತ್ತು ಹಣದ ಚೀಲ ಇರಬೇಕು. ನೀನು ನನ್ನ ಜೀವದಾತೃ. ಅವುಗಳನ್ನು ತೆಗೆದುಕೊ."

" ಅಲ್ಲಿ ಏನೂ ಇಲ್ಲ". ದೆನಾರ್ದಿಯೆ ಈ ಮೊದಲೇ ಅವುಗಳನ್ನು ಕದ್ದು ಮುಚ್ಚಿಟ್ಟುಕೊಂಡಿದ್ದ.

" ಯಾರೋ ದುರಾತ್ಮರು ಕದ್ದಿರಬೇಕು" ಎಂದನು ಅಧಿಕಾರಿ, " ನೀನು ನನ್ನನ್ನು ಬದುಕಿಸಿದೆ. ನೀನು ಯಾರು ?"

ದೆನಾರ್ದಿಯೆಗೆ ಸುಳ್ಳು ಹೇಳುವುದೆಂದರೆ ನೀರು ಕುಡಿದಹಾಗೆ; " ನಾನೂ ಒಬ್ಬ ಫ್ರೆಂಚ್ ಅಧಿಕಾರಿ. ನಿನ್ನ ಜೀವವನ್ನು ಉಳಿಸಿದ್ದೇನೆ. ನಾನು ಇನ್ನು ಹೋಗಬೇಕು. ನೀನೂ ಎಲ್ಲಿಯಾದರೂ ಹೋಗಿ ಬದುಕಿಕೊ" ಎಂದನು.

" ನನ ಹೆಸರು ಪಾಂಟ್‌ಮರ್ಸಿ. ನಿನ್ನ ಹೆಸರೇನು ?" ಎಂದನ್ನು ಅಧಿಕಾರಿ.

" ದೆನಾರ್ದಿಯೆ."

" ದೆನಾರ್ದಿಯೆ, ನೀನು ಮಾಡಿರುವ ಉಪಕಾರವನ್ನು ನಾನು ಎಂದೆಂದಿಗೂ ಮರೆಯುವುದಿಲ್ಲ."

ಇದಾದ ಕೆಲವು ದಿವಸಗಳೊಳಗಾಗಿಯೇ ಆ ಹಳ್ಳಿಯಲ್ಲಿ ಹೋಟಲು ಪ್ರಾರಂಭವಾದುದು. ದೆನಾರ್ದಿಯೆಗೆ ಬಂಡವಾಳ ಎಲ್ಲಿಂದ ಬಂದಿತೆಂಬುದನ್ನು ಹೇಳಬೇಕಾಗಿಲ್ಲ !

ಆ ಹೋಟಲಿನಲ್ಲಿ, ಇವನು, ಇವನ ಹೆಂಡತಿ ಮತ್ತು ಇವರ ಎರಡು ಹೆಣ್ಣುಮಕ್ಕಳು – ಎಪೋನಿನ್ ಮತ್ತು ಅಜೆಲ್ಮ – ಇಷ್ಟು ಜನರೇ ಇದ್ದುದು. ಇವನ ಹೆಂಡತಿ ಗಂಡನಿಗೆ ತಕ್ಕವಳಾಗಿದ್ದಳು. ಸ್ತ್ರೀಜನಕ್ಕೆ ಸ್ವಾಭಾವಿಕವಾದ ಕರುಣೆ, ವಿನಯ, ಮುಂತಾದ ಗುಣಗಳೊಂದೂ ಇವಳಲ್ಲಿ ಇರಲಿಲ್ಲ. ಈ ದಂಪತಿಗಳಿಗೆ ಯೋಗ್ಯವಾದ ಮಕ್ಕಳು ಆ ಎರಡು.

ಹೀಗಿರುವಲ್ಲಿ ಒಂದು ದಿನ ಅನಾಥೆಯಾದ ಹೆಂಗುಸೊಬ್ಬಳು ಇವರ ಹೋಟಲಿಗೆ ಬಂದಳು. ಅವಳ ಉಡಿಗೆ ತೊಡಿಗೆಗಳನ್ನು ನೋಡಿದರೆ – ಧನಿಕಳಲ್ಲದಿದ್ದರೂ ಯೋಗ್ಯವಾದ ಅಭಿರುಚಿಯುಳ್ಳವಳೆಂದು

ಹೇಳುವಂತಿತ್ತು. ಅವಳು ಬೆಳಗಿನಿಂದಲೂ ಪ್ಯಾರಿಸಿನಿಂದ ನಡೆದು ಬಂದಿದ್ದಳು. ತಲೆಯಮೇಲೆ ಒಂದು ಗಂಟು; ಕಂಕುಳಲ್ಲಿ ಒಂದು ಹೆಣ್ಣು ಕೂಸು.

ಹೋಟಲಿನ ಯಜಮಾನತಿ ತನ್ನ ಆ ಎರಡು ಕುರೂಪಿ ಮಕ್ಕಳನ್ನು ದೊಡ್ಡದಾದೊಂದು ತೊಟ್ಟಿಲಿನಲ್ಲಿ ಕೂರಿಸಿ ತೂಗುತ್ತಿದ್ದಳು. ತಾನು ಹೇಳುತ್ತಿದ್ದುದು ಹಾಡೆಂದು ಅವಳು ಬಗೆದಿದ್ದರೂ ಕೇಳುವವರು ಒಪ್ಪುತ್ತಿರಲಿಲ್ಲ. ಬಂದ ಹೆಂಗುಸು, "ಎಷ್ಟು ಮುದ್ದಾಗಿವೆ — ನಿಮ್ಮೆರಡು ಮಕ್ಕಳು" ಎಂದಳು. ಮಕ್ಕಳೇನು ಮುದ್ದಾಗಿರಲಿಲ್ಲ. ಆದರೆ, ಎಂತಹ ತಾಯಿಂದಿರೇ ಆಗಿರಲಿ, ಎಂತಹ ಮಕ್ಕಳೇ ಆಗಿರಲಿ, ಆ ಮಕ್ಕಳನ್ನು ಹೊಗಳಿದರೆ ಆ ತಾಯಿಂದಿರಿಗೆ ಮಹದಾನಂದವಾಗುವುದು. ಇದನ್ನು ತಿಳಿದೋ ಏನೋ ಆ ಅನಾಥ ಹೆಂಗುಸು ಹಾಗೆ ಹೇಳಿರಬೇಕು. ಅಥವಾ, ತನ್ನ ಸ್ವಭಾವಕ್ಕೆ ಅನುಗುಣವಾಗಿ ಎಳೆಯ ಮಕ್ಕಳೆಲ್ಲವೂ ಮುದ್ದಾಗಿರುವುದೆಂದು ಭಾವಿಸಿದಳೋ ಏನೋ! ಅಂತೂ ತಾಯಿಗೆ ಸಂತೋಷವಾಯಿತು. "ಏನೋ, ಇವೆಯಮ್ಮ. ಬನ್ನಿ, ಕುಳಿತುಕೊಳ್ಳಿ. ನಿಮ್ಮ ಹೆಸರೇನು?" ಎಂದಳು.

"ಅಯ್ಯೋ! ಅದೊಂದು ದುರದೃಷ್ಟ ಹೆಸರು. ಫಾಂತೀನ್ ಎಂದು ಕರೆಯುತ್ತಾರಮ್ಮ. ಇದು ನನ್ನ ಮಗು — ಕೊಸೆತ್ ಎಂತ ಕರೆಯುತ್ತೇನೆ ಇದನ್ನ" ಎಂದಳು ಆಗಂತುಕಳು.

"ಏನು ಮೂರು ವರ್ಷವಿರಬಹುದು? ನಮ್ಮ ಹಿರಿಯ ಹುಡುಗಿಯ ವಯಸ್ಸೆ!" ಎಂದಳು ಹೋಟಲಿನವಳು.

"ಹೌದಮ್ಮ — ಮೂರು ವರ್ಷ; ಇಷ್ಟು ದಿನವೂ ಹೇಗೋ ಆಯಿತು. ಇನ್ನುಮುಂದೆ ಹೇಗೆ ಇದನ್ನು ಕಾಪಾಡುತ್ತೇನೆಯೋ ದೇವರೇ ಬಲ್ಲ."

"ಅದೇಕಮ್ಮಾ, ಹಾಗೆನ್ನುವಿರಿ?"

"ನೋಡಿ, ತಾಯಿ. ನಾನೂ ನನ್ನ ಯಜಮಾನರೂ ಪ್ಯಾರಿಸ್ಸಿನಲ್ಲಿದ್ದೆವು. ಅವರು ಒಬ್ಬ ದೊಡ್ಡಮನುಷ್ಯರ ಮನೆಯಲ್ಲಿ ಕೆಲಸದಲ್ಲಿದ್ದರು. ಈಗ್ಗೆ ಮೂರು ವರ್ಷದಲ್ಲಿ ಕೂಸೆತ್ ಹುಟ್ಟಿದುದು.

ಕಣ್ಣು ಬಿಟ್ಟರು!...."ಪೆನ್‌ಷನ್ ಆದಮೇಲಾದರೂ, ದೇವರು, ದೇಶಿಕರು ಅಂತ ಜೋತಮಾಡುವುದಕ್ಕೆ ಕಲೀತೀರೋ, ಅಥವಾ....ಅಯ್ಯೋ! ಆಫೀಸೇ ಗುಡಿ, ದೊಡ್ಡ ಸಾಹೇಬರೇ ದೇವರು, ಶಾಯಿಯೇ ತೀರ್ಥ, ಪೆನ್ಸಿಲೇ ಪ್ರಸಾದ ಅಂತ ಜನ್ಮಾನ ತೇದದ್ದಾಯಿತಲ್ಲಾ....ಕೊಳ್ಳಿ! ತಟ್ಟೀನ!....ಸಂಜೆ ನಿಮ್ಮ ಗೋಮುಖವ್ಯಾಘ್ರ ಗುಮಾಸ್ತೆ ಒಪ್ಪಿಸಿದ ಪೂಜೆಯಿಂದ ಚತುರ್ಭುಜ ಬೆಳೆದು ಬಿಟ್ಟತೇನು? ಮನೆಗೆ ಬರುವುದಂತೂ ತಡ! ಬಂದ ಕೂಡಲೇ ಈ ಅನಂತ ಪದ್ಮನಾಭನ ಅವತಾರ ಬೇರೆ!...." "ಗಾಡಿಯವನಿಗೆ ಇನ್ನೂ ಬಾಡಿಗೆ ಕೊಟ್ಟಿಲ್ಲ, ಕಾದಿದಾನೆ, ಅಕ್ಕ" ಎಂದು ಹೇಳಿ ಚಂಚು ಸರಸಮ್ಮನ ಭಾಷಣವನ್ನು ಅಷ್ಟಕ್ಕೇ ಕತ್ತರಿಸಿದಳು.

# ನೂರಡಿ ರಸ್ತೆ

ಮರುದಿನ ಬೆಳಗ್ಗೆ ರಾಯರು ಕೋಲು ಸಹಿತ ವಾಕಿಂಗ್ ಹೊರಟರು: ಅಂದರೆ, ರಿಟೈರಾದ ವಾನಪ್ರಸ್ಥದವರೊಂದಿಗೆ ಸೇರಿದರು. ಜೊತೆಗೊಂದು ನಾಯೂ ಇದ್ದಿದ್ದರೆ, ಪಾಪ, ಶ್ವಾನಪ್ರಸ್ಥರ ಗುಂಪಿಗೆ—ಎಂದು ಹೇಳಬಹುದಾ ಗಿತ್ತೋ ಏನೋ!

ಅದುವರೆಗೂ ಅವರು ಕಿಂಕರಪುರದ ರಸ್ತೆಗಳಲ್ಲಿ ಎಳೆಬಿಸಿಲು ಕಂಡಿದ್ದೇ ಇಲ್ಲ. ಹಾಸಿಗೆಯಿಂದೆದ್ದು ಅಂಗೈ ನೋಡಿ, ಮುಂಗೈ ಊರಿ ಕೆಳಕ್ಕಿಳಿದು, ದೇಹೋಪಚಾರ ತೀರಿಸಿ, ಕಾಫಿ ಕುಡಿದು, ನೆಟ್ಟನೆ ಅಡ್ಡದಾರಿಯಿಂದ ತೂರಿ ತಮ್ಮ ಕೋಣೆಯೊಳಕ್ಕೆ ಬಿಜಯಮಾಡುವರು; ಅಲ್ಲಿ ಅನೇಕ ಮಹದ್ವಿಷಯ ಗಳ ಕಾಗದಪತ್ರದ ರಾಶಿಯನ್ನು ಹೊತ್ತು ಬೆನ್ನುಬಾಗಿದ್ದ ತಮ್ಮ ಮೇಜಿನ ಮುಂದೆ, ಒಂದು ತಿರುಪು ಕುರ್ಚಿಯಲ್ಲಿ ಕೂಡುವರು. ಅದಕ್ಕೂ ಇದಕ್ಕೂ ತಾಳೆಹಾಕುತ್ತ, ಕಟ್ಟುಗಳನ್ನು ಕೆದಕುವರು. ಒಂಬತ್ತು ಗಂಟೆಯ ಹೊತ್ತಿಗೆ ನಾರಣಪ್ಪನ ಚಪ್ಪಲಿ ಸದ್ದು ಹೊರಗಡೆ ಕೇಳಿಸುವುದು. ಆತ ಬಂದು ಸಾಹೇಬರ ಸೋತ ಹಸ್ತದಿಂದ ಇನ್ನೊಂದಿಷ್ಟು ಕಾಗದಗಳಿಗೆ ರುಜುಮಾಡಿಸುವನು. ಏತ ನ್ಮಧ್ಯೆ, ಸಾಹೇಬರ ದರ್ಶನಾಕಾಂಕ್ಷಿಗಳಾಗಿ ಬರುವವರ ತಂಡ ಬೇರೆ. ಜಗು ಲಿಯ ಮೇಲೆ ಆಳನ್ನೇನೋ ಕೂರಿಸಿರುತ್ತಾರೆ. ಆದರೆ, ಸರಸಮ್ಮನಿಗೆ ಕರಿ ಬೇವಿನ ಸೊಪ್ಪು, ದವನ, ಸೀಗೆಪುಡಿ, ಮುಂತಾದುವುಗಳನ್ನು ತರಲು ಆಳು ಗಳೆಲ್ಲ ಕ್ಷಣಕ್ಕೊಬ್ಬನಂತೆ ಎಂಟು ಮೂಲೆಗಳಿಗೂ ಓಡುತ್ತಿರುತ್ತಾರೆ. ಬರು ವವರನ್ನು ತಡೆಯುವವರು ಒಬ್ಬರೂ ಸಾಮಾನ್ಯವಾಗಿ ಇರುವುದಿಲ್ಲ; ಅಥವಾ ಇದ್ದರೂ ಮನೆತನಕ ಬಂದವರು ಆಳುಗಳ ಅಡ್ಡಮೋರೆಗೆ ಹೆದರಿ ಹಜಾರ ನೋಡಿಕೊಂಡು ಹಿಂತಿರುಗುತ್ತಾರೆಯೆ? ಜವಾನರನ್ನು ಗದರಿಸಿಯೋ, ಆಕರ್ಷಿಸಿಯೋ ಸಾಹೇಬರ ಕೋಣೆಯೊಳಕ್ಕೆ ಬಂದೇ ಬಿಡುತ್ತಾರೆ.

ಅವರ ಪೈಕಿ ಚಂದಾ ಎತ್ತುವವರೇ ಹೆಚ್ಚು! ದೇವಸ್ಥಾನದ ಜೀರ್ಣೋ ದ್ಧಾರ, ಹಳೇ ವಿದ್ಯಾರ್ಥಿಗಳ ಸಂಘ, ವಿದ್ಯಾರ್ಥಿಗಳ ವ್ಯಾಸಂಗ ನಿಧಿ, ವಿದ್ಯಾರ್ಥಿ ಗಳ ಮುಷ್ಕರ ನಿಧಿ, ಸ್ವಾಮಿಗಳಿಗೆ ಬೆಳ್ಳಿ ರೂಪಾಯಿ ಪಾದಪೂಜೆ, ಬೇಬಿ ಷೊ,

ಬೆನಿಫಿಟ್ ಶೊ, ಗ್ರೀಷ್ಮ ಶಿಕ್ಷಣಾಲಯ, ಉಚಿತ ಪ್ರಸವಾಲಯ, ಅವಿಭಕ್ತ ಕುಟುಂಬ ಕಲಹ ಪರಿಹಾರ ನಿಧಿ, ವೃದ್ಧರ ವರ್ಧಂತಿ, ಆಗಂತುಕರ ಸ್ವಾಗತ ಸಮಿತಿ, ಬಂಜೆಯರ ನಾಗಪ್ರತಿಷ್ಠೆ, ಜರೀಪೇಟದವರ ಗಣೇಶ ಮಂಗಳಾರತಿ, ಕರೀಪೇಟೆಯವರ ಸತ್ಯನಾರಾಯಣ ಪೂಜೆ....ರಾಮಾಯಣದಲ್ಲಿಲ್ಲೂ ರಾಮ ನಾಟ್ಯ ನೋಡದಿದ್ದರೂ, ಆತ ಹುಟ್ಟಿದ ನವಮಿ ಪ್ರಯುಕ್ತ ನಾಟ್ಯ ಪ್ರದರ್ಶನ....ಹೀಗೆ ನೂರೆಂಟು! ಎಷ್ಟು ರೀತಿಗಳಲ್ಲಿ ಯಾರ ಯಾರ ಮೂಲಕ ಯಾರ ಯಾರದೋ ಹಣ ಯಾವ ಯಾವ ಉದರಗಳನ್ನು ಭರ್ತಿಮಾಡುತ್ತಲಿದೆ ಎಂದು ರಾಯರು ಬೆರಗಾಗುವರು! ಯಾರಿಗೆ ಕೊಡುವುದು, ಯಾರಿಗೆ ಬಿಡುವುದು? ಎಲ್ಲರೂ ನಿಸ್ಪೃಹರೇ! ಸಮಾಜೋದ್ಧಾರಕರೇ! ಎಲ್ಲರೂ ಅತಿಮುಖ್ಯವಾದ ದೇಶೋನ್ನತಿ ಕ್ಷೇತ್ರಗಳಲ್ಲಿ ತಮ್ಮ ತನುವನ್ನೂ ಇತರರ ಧನವನ್ನೂ ಅರ್ಪಿಸಿ ಪೇಪರುಗಳಲ್ಲಿ ಪ್ರಖ್ಯಾತರಾಗುವ ಮಹನೀಯರೇ!

ಬಂದವರೊಬ್ಬರಿಗೂ ರಾಯರು ಹಣ ಕೊಡಲಿಲ್ಲ. "೨೫, ೧೦೦ ಅಂತ ಬೇಕಾದರೆ ಬರೆಯುತ್ತೇನೆ, ನಿಮ್ಮ ಪಟ್ಟಿಯಲ್ಲಿ! ಅದನ್ನ ಇತರರಿಗೆ ತೋರಿಸಿ. 'ಆ! ಇಂಥ ಬಿಗಿ ಮುಷ್ಟಿ ಇಷ್ಟು ಕೊಟ್ಟಿದಾನೆಯೆ? ಹಾಗಾದರೆ ನಾನು ಅವನಿಗಿಂತ ತೆರಬೇಕು' ಅಂತ ಯಾವನಾದರೂ ೫೦, ೧೦೦೦ ಬಿಚ್ಚಬಹುದು. ಸರಿಯೋ? ಬರೀ ಬರಿಯುತ್ತೇನೆ, ಅಷ್ಟೆ" ಎಂದು ಹೇಳುವರು.

ಆರ್.ಸಿ., ಡಿ.ಸಿ., ಐ.ಸಿ., ಎ.ಸಿ., ಪಿ.ಸಿ., ಪಿ.ಪಿ.ಸಿ., ಮುಂತಾದ ಅಧಿಕಾರಿಗಳಿಗೆ ಕ್ವೆರಿ, ಕುಹಕ, ವರದಿ, ಲೆಕ್ಕ, ನೋಟು, ಜವಾಬು ಅಂಕಿ ಅಂಶ ವಿವರಣೆ ನೆನಪು ಮೆಮೊ ಸಮ್ಮರಿ ಲೊಟ್ಟು ಲೊಸ್ಕು ಎಂಬಿವುಗಳನ್ನು ಕಳುಹಿಸಲು ಬೆವರುತ್ತ ನಾರಣಪ್ಪನವರು ನಕಲು ತರುವರು. ದಿನವೂ ಧಾಳಿ ಮಾಡುವ ಚಂದಾ ತಂಡವನ್ನು ಒತ್ತರಿಸಿ, ರಾಯರು ಅವುಗಳನ್ನೆಲ್ಲ ಆ ಏಸೆಡ್ ಕೂಲಂಕಷವಾಗಿ ಪರಿಶೀಲಿಸುವರು. ಮಂತ್ರಲೋಪ ತಂತ್ರಲೋಪ ತ್ಯಾಜ್ಯಲೋಪ ವ್ಯಾಜ್ಯಲೋಪ ಸ್ವಲ್ಪವೂ ಅವರ ಕೆಲಸಕಾರ್ಯಗಳಲ್ಲಿ ಕಾಣದು. ಟಿಗೆ ಅಡ್ಡಗೀಟು, ಐಗೆ ಚುಕ್ಕಿ ಎಲ್ಲವನ್ನೂ ಚಾಚೂತಪ್ಪದೆ ರಾಯರು ಸ್ವಹಸ್ತದಿಂದಲೇ ಮಾಡುವರು. ಅವರ 'ಕೈಪಳಕ' ಅಷ್ಟು ಸಮರ್ಪಕ.

ತಮ್ಮ ಆಫೀಸ್ ಕುರ್ಚಿಗಳಲ್ಲಿ ಯಾವುದಾದರೂ ಖಾಲಿಬಿದ್ದಾಗ ಅವುಗಳನ್ನು ಭರ್ತಿಮಾಡಲು ನಮ್ಮವರಿದಾರೆಂದು ಖುದ್ದಾಗಿ ಹೇಳಹೋಗಲು

ಬಂಗಲೆಯಲ್ಲೇ ರಾಯರನ್ನು ಕಾಣಬರುವ ಜನ ಬೇರೆ, ಹಣ್ಣುಹಂಪಲು, ಹಾರ, ಅಕ್ಷತೆ, ತಿರುಪತಿ ವಡೆ, ಗಂಗೋದಕ, ಇತ್ಯಾದಿಗಳನ್ನು ಹಿಡಿದು ಬರುವರು! ಜೊತೆಗೆ 'ಹಿರಿಯರು,' 'ಸ್ವಾಮಿಗಳು,' ಅಥವಾ 'ಪುರೋಹಿತರು!' 'ನಿಮ್ಮ ತಂದೆಯವರು ಬಹಳ ತೇಜಸ್ವಿಗಳು, ಮೇಧಾವಿಗಳು! ನಿಷ್ಠರು! ನನಗೆ ಮೇಷ್ಟರಾಗಿದ್ದರು.... ನನ್ನ ಎಡಗೈಯಲ್ಲಿ ನಾನೇ ನಶ್ಯ ತೀಡಿ ಕೊಡುವೆ' ಎಂದು ಹೇಳಿಕೊಂಡು, ಮಗನ ಮಮತೆಯನ್ನು ದಕ್ಕಿಸಿಕೊಳ್ಳಲು ಬಯಸುವವರೊಬ್ಬರು! ಶುದ್ಧ ಸುಳ್ಳು; ರಾಯರಿಗೂ ನಂಬಿಕೆ ಸಾಲದು. ಮತ್ತೊಬ್ಬರು ತೀಡಿದ್ದಕ್ಕೆ ಅವರು ಕೈನೀಡಿದ್ದೇ ಇಲ್ಲವೆಂದು ರಾಯರಿಗೆ ಗೊತ್ತು. ಆದರೂ ಅವರು ಆ ಮಾತನ್ನು ನಂಬಿದಂತೆ ನಟಿಸುವರು. "ನಿಮ್ಮ ಮಾವಂದಿರ ಹಳೆಯ ಕಕ್ಷಿಗಾರ ನಾನು!" "ನಿಮ್ಮ ತೀರ್ಥರೂಪರು ನಮ್ಮ ಮನೆಯಲ್ಲಿ ವಾಸವಾಗಿದ್ದರು.... ಬಾಡಿಗೆಗೆ. ಮೇಷ್ಟರಲ್ಲಾ ಅಂತ ತಿಂಗಳಿಗೆ ಎಂಟಾಣೆ ಇಳಿಸಿ ಕೊಟ್ಟಿದ್ದೆ; ನನ್ನ ಮಗನಿಗೆ ಬಿಟ್ಟಿ ಟ್ಯೂಷನ್ ಹೇಳುತ್ತಿದ್ದರು, ಆ ಎಂಟಾಣೆ ಋಣ ತಮ್ಮ ಮೇಲೆ ಇರಕೂಡದು, ಅಂತ! ಮಹಾನುಭಾವರು!", "ನಿಮಗೆ ಹಲಸಿನ ಹಣ್ಣೆಂದರೆ ತುಂಬ ಪ್ರೀತಿ ಎಂದು ಅಡಿಗೆಯವನು ಹೇಳಿದ.... ನನ್ನದು ಬೆಟ್ಟದ ಹಲಸೂರು".... "ನಿಮ್ಮ ತಾಯಿ ನನಗೆ ಕೈತುತ್ತು ಹಾಕುತ್ತಿದ್ದರು .... ಕೃಪೆ ಇರಬೇಕು." "ನಿಮ್ಮ ಅಕ್ಕನ ಮೊದಲನೆಯ ಹಾಡಿನ ಮೇಷ್ಟರು ನನ್ನ ಭಾವಮೈದುನ," ಇತ್ಯಾದಿ ಅವರು ತಮ್ಮ ಕಾರ್ಯಸಾಧನೆಗಾಗಿ ವಿವಿಧವಾದ ಹೇಳಿಕೆಗಳನ್ನು ಕೊಡುವರು. ಮನನೋಯುದಂಥ ಮಾತುಗಳಲ್ಲೇ ಅವರಿಗೆಲ್ಲ ಇಲ್ಲವೆಂದು ಮನೆಯಾಚೆ ಕಳುಹಿಸಿಕೊಟ್ಟಮೇಲೆ, ರಾಯರು ಗಡಿಯಾರ ನೋಡಿ, ಅಡಿಗೆ ಮನೆಯೊಳಕ್ಕೆ ಇಣಿಕಿ, ಊಟದ ಕೋಣೆಯಲ್ಲಿ ಕೂಡುವರು. ಊಟದ ಶಾಸ್ತ್ರ ಮುಗಿಸಿ, ಮೈಗೆ ಅಂಗ್ಲರ ಅವಲಕ್ಷಣ ಬಟ್ಟೆ ತೊಡಿಸಿ, ಅದನ್ನು ತೆಗೆದುಕೊಂಡು ಕಾರಲ್ಲಿ ಕೂಡಿಸುವರು. ಆಫೀಸ್ ಮೆಟ್ಟಲು ಹತ್ತಿಸಿ, ಅಲ್ಲಿಯ ಒಂದು ತಿರುವು ಪೀಠದಲ್ಲಿ ಸ್ಥಾಪಿಸುವರು.

ಸರಿ! ಅಲ್ಲೂ, "ಪುನರಾಯಾನ್ ಮಹಾಲಿಪಿವೃಂದಂ." ಅಲ್ಲೂ ರಾಯರ ಸುತ್ತ ಲಿಪಿಗಾರರ ತಂಡ. ಅಲ್ಲೂ ನಾರಣಪ್ಪನವರು! ಅದೇ ಮುಗಿಯದ ಕಂತೆ! ಅರ್ಜಂಟ್, ಇಮ್ಮೀಡಿಯೆಟ್, ಗುಮಾನಿ, ಗುಹ್ಯತರಂ, ತಡ, ಬಡ, ಎಂಬ ಕೆಂಪು ನೀಲಿ ಚೀಟಿಗಳನ್ನು ಒಂದೊಂದು ಕಂತೆಯಿಂದಲೂ ಕೀಳಿಸಿ,

ತಮ್ಮ ಜವಾಬ್ದಾರಿಯನ್ನು ಹೆಗಲಮೇಲಿಂದ ಇಳಿಸಿಕೊಳ್ಳುವ ಜಾಣತನದ ಜವಾಬುಗಳನ್ನು ಬರೆದು ಕೃತಾರ್ಥರಾಗುವುದು! ವಾಗ್ಜಾಲದ ಮೂಲಕ ಮಾಜಾಲದಂತೆ ತೂರಿಕೊಳ್ಳುವ ಉಪಾಯಗಳು!....ಬಹುಶಃ, ಆದರೆ, ಹೋದರೆ, ಪರಂತು, ಸದ್ಯಕ್ಕೆ, ಸಾಧ್ಯವಾದಷ್ಟು, ಹೆಚ್ಚು ಕಡಮೆ, ತಪ್ಪಾಗಲಾರದು, ಸರಿಯಿರಬಹುದು, ಈಗಿನ ಪರಿಸ್ಥಿತಿಯಲ್ಲಿ, ನನಗೆ ತೋರಿದ ಮಟ್ಟಿಗೆ, ತೋರುತ್ತೆ, ಯಾವಾಗಲಾದರೂ, ಎಲ್ಲವೂ ಸರಿಹೋದ ಪಕ್ಷದಲ್ಲಿ, ಎಂಬಿವೇ ಮುಂತಾದ ಅಡ್ಡಗೋಡೆಗಳ ಮೇಲೆ ತಮ್ಮ ಅಭಿಪ್ರಾಯಗಳನ್ನು ಕೂರಿಸಿ, ನಿರ್ಧಾರ ಮಾಡಬೇಕಾದ ಕಷ್ಟದಿಂದ ತಪ್ಪಿಸಿಕೊಳ್ಳುವುದು!

ಐದು ಗಂಟೆಗೆ ಭಾವನವರು ಬರುತ್ತಾರೆ, ಕೆಲಸವಿಲ್ಲದೆ ಕೂತು ಕೊಬ್ಬುವ ಶ್ರೀಮಂತರ ಮನೆಗಳ ಅಂತರಂಗದ ಸ್ವಾರಸ್ಯ ಸಮಾಚಾರಗಳನ್ನು ಹೇಳುತ್ತ "ಇದನ್ನೆಲ್ಲ ನನಗೆ ಯಾಕೆ ಹೇಳುತ್ತೀಯಾ! ನನಗೇನೂ ಬೇಡ!" ಎಂದು ಅವರನ್ನು ತಡೆದರೆ, ಅವರು "ಕೇಳಬೇಕಯ್ಯ ನೀನು! ಲೋಕ ಹೇಗಿದೆ ಅಂತ ತಿಳಿದುಕೊಳ್ಳಬೇಡವೆ? ಬಾಯಿಗೆ ಮೊಸರು ಮೆತ್ತುತ್ತಾ ಇರುವವರ ಕೈ ಎಲ್ಲ ಕೆಸರು ಅಂತ ತಿಳಿದುಕೊ! ಲೋಕವ್ಯವಹಾರ ಕಣಯ್ಯ, ಇವೆಲ್ಲ ನಿನ್ನ ಪತ್ರವ್ಯವಹಾರದ ಹಾಗಲ್ಲ" ಅನ್ನುವರು. ಸದ್ಯಃ ಕ್ಲಬ್ ತಲಪುತ್ತಲೂ ಶೀನಪ್ಪನವರು ತಮ್ಮ ಕತೆಗಳ ಸಮೇತ, ಇತರ ಪಶುಗಳನ್ನು ಹಿಡಿಸಲು ಹಸುವಿನಗುಡಿಗೆ ಹೊರಟುಬಿಡುವರು. ಆದ್ದರಿಂದ, ರಾಯರು ಕ್ಲಬ್ಬಲ್ಲೇ ಒಂದು ಮೂಲೆಯಲ್ಲಿ ಯಾರಿಗೂ ಬೇಡವಾದ ಹರಕಲು ಕುರ್ಚಿಯೊಂದರಲ್ಲಿ ಕೂತುಕೊಳ್ಳುವರು.

ಕ್ಲಬ್‌ನಲ್ಲಿ ರಾಯರು ಏಕಾಂತ ಜೀವಿ. ಅವರು ಇಸ್ಪೀಟು ಆಡುವುದಿಲ್ಲ; ಟೆನ್ನಿಸ್, ಇತ್ಯಾದಿ ಚೆಂಡಾಟಗಳಿಗೆ ಅವರ ಮೈ ಒಪ್ಪದು. ಹರಟೆ ಹೊಡೆಯುವುದಕ್ಕೆ ನಾಲಗೆ ಹರಿತವಿಲ್ಲ; ಆಟವಾಡುವುದಕ್ಕೆ ಕಾಲು ನುರಿತದ್ದಿಲ್ಲ; ಬಿರಟೆ ತೆಗೆದು ಅಗ್ನಿಪಾನ ಮಾಡುವುದೂ ಅವರಿಗೆ ಬೇಡ! ಆದರೂ ದೊಡ್ಡ ಸಾಹೇಬರೂ ಇತರ ಮೇಲುಮೇಲಿನ ಅಧಿಕಾರಿಗಳೂ ದೇವತೆಗಳೂ ಬರುವ ಸ್ಥಳ. ತಾವೂ ಅವರಿಗೆ ಕಾಣಿಸಿಕೊಳ್ಳಬೇಕಾದದ್ದು ಕರ್ತವ್ಯ. ಅವರು ಬಂದಾಗ, ಎದ್ದು ಕೈಮುಗಿಯುವುದು, ಅವರ ಹಾಸ್ಯಕ್ಕೆ ನಾಲ್ಕು ಜನ ನಕ್ಕಾಗ ತಾವೂ ಅರೆಕ್ಷಣ ನಗುವುದು, ಇಷ್ಟೇ ಅವರು ಕ್ಲಬ್‌ನಲ್ಲಿ ಮಾಡುತ್ತಿದ್ದದ್ದು. ಅವರ

ಗುರುತು ಹಿಡಿದ ಸದಸ್ಯರು ಯಾರಾದರೂ 'ಹಲ್ಲೋ' ಎಂದು ಹ್ಯಾಟೆತ್ತಿದರೆ, ರಾಯರೂ 'ಹಲ್ಲೋ' ಎಂದು ಅದೇ ಶ್ರುತಿಯ ಮಾರ್ದನಿಕೊಟ್ಟು ರುಮಾಲೆತ್ತುವರು. ಮರ್ಯಾದಸ್ಥರಿಗೆಲ್ಲ ಅವರು ಮರುಮರ್ಯಾದೆ ಮಾಡುವರು. ಭಂಡರನ್ನು ಅವರು ಕಡೆಗಣ್ಣಿಂದ ದೂಡಿಬಿಡುವರು. ಪುಂಡರಿಗೆ ಅವರು ಬೇಕಾಗಿಯೂ ಇರಲಿಲ್ಲ.

ಕ್ಲಬ್‌ನಲ್ಲಾಗುವ ಅಲ್ಲೋಲಕಲ್ಲೋಲದ ನಡುವೆಯೂ ಅವರಿಗೆ ತಮ್ಮ ಆಫೀಸ್ ಕೆಲಸಗಳೇ ತಲೆ ಕೆಡಿಸುವುವು. "ಬಲಗಡೆ ಡ್ರಾಯರಿಗೆ ಬೀಗ ಹಾಕಿದೆನೇ?" "ಅತೀವ ಗುಟ್ಟು ಎಂಬ ಕಟ್ಟನ್ನು ಒಳಬೀರುವಿನಲ್ಲಿಟ್ಟೆನೇ?" "ಡಿಸ್ಪಾಚಿಂಗ್ ಕ್ಲಾರ್ಕ್‌ನ ಲೆಕ್ಕದಲ್ಲಿ ಎಂಟು ದಿನದ ರಜ ಉಳಿದಿತ್ತೆ?" ಎಂಬ ಅನುಮಾನಗಳು ಅವರನ್ನು ಅಲ್ಲೂ ಮುತ್ತುವುವು.

ದೊಡ್ಡಮನುಷ್ಯರು ಹತ್ತಿಪ್ಪತ್ತು ಜನ ಕ್ಲಬ್‌ನ್ನು ಬಿಟ್ಟು ಹೊರಟಾಯಿತೆಂದರೆ, ರಾಯರ ಕಾರು ಅವರಿದ್ದ ಸ್ಥಳದ ಹತ್ತಿರ ಬರುವುದು. ಆ ಡ್ರೈವರನಿಗೆ ಗೊತ್ತು: ಇನ್ನು ಸಾಹೇಬರು ಅಲ್ಲಿ ಇದ್ದೂ ಪ್ರಯೋಜನವಿಲ್ಲವೆಂದು. ಮನೆ ಸೇರಿ, ಊಟ ಮುಗಿಸಿ, ಅವರು ಮತ್ತೊಂದಿಷ್ಟು ಅರ್ಜಂಟ್ ಫೈಲುಗಳನ್ನು ಪರಾಂಬರಿಸಿದಮೇಲೆ, ಮಲಗುವರು. ನಿದ್ದೆಯಲ್ಲೂ ನಾರಣಪ್ಪನ ಕಾಟವೇ! ಅನಂತಯ್ಯನ ಓರೆ ನೋಟವೇ! ಡಿಸ್ಪಾಚಿಂಗ್ ಕ್ಲಾರ್ಕನ ರಜದ ಲೆಕ್ಕದ ಸಂದೇಹ, ಅವರ ದೇಹದೊಳಗೆ!

"ಮಹಾಬಲರಾಯರೇ! ನೀವು ಕೂತು ಕೆಟ್ಟಿರಿ!....ವಾಕಿಂಗ್ ಹೋಗಬೇಕು ನೀವು, ದಿನವೂ ಬೆಳಗ್ಗೆ ನಾಲ್ಕೈದು ಮೈಲಿ" ಎಂದು ಡಾಕ್ಟರುಗಳು ಹೇಳಿದಾಗಲೆಲ್ಲ "ತಾಳಿ! ರಿಟೈರಾಗಿ ಬಿಡಲಿ! ಆಮೇಲೆ ಬೆಂಗಳೂರು ರಸ್ತೆಗಳನ್ನೆಲ್ಲ ಒಂದೊಂದಾಗಿ ಸವೆಸಿಬಿಡುತ್ತೇನೆ" ಎನ್ನುವರು.

ಮೊದಲನೆಯ ದಿನ, ವಾಕಿಂಗಿಗಾಗಿ ಮನೆಯಿಂದ ಹೊರಬಿದ್ದಾಗ, ರಾಯರಿಗೆ ಎತ್ತ ಕಡೆ ಹೋಗುವುದೆಂದು ನಿರ್ದಿಷ್ಟವಾಗಿ ಗೊತ್ತಾಗಲಿಲ್ಲ. ಮನೆಯಾಚೆ ನೂರಿನ್ನೂರಡಿ ದಾಟಿದರೆ, ಒಂದು ಚೌಕ ಸಿಕ್ಕುವುದು. ಅಲ್ಲಿ, ಅವರ ಕಾರು ಮಾರಿದ ಕಾರು—ಮೊನ್ನೆ ದಿನವೂ ಎಡಕ್ಕೆ ತಿರುಗುತ್ತಿತ್ತು. ಕಾರಿನಂತೆ ಕಾಲೂ —ಅತ್ತ ಕಡೆಗೇ ಕಣ್ಣೋಡಿಸುವುದು. ಇನ್ನು ಮುಂದೆ ಅದೇ ದಾರಿ ಏಕೆ ಎಂದು ಅವರು ಅಲ್ಲಿ ಬಲಕ್ಕೆ ತಿರುಗಿದರು. ಆ ರಸ್ತೆ ಎಲ್ಲಿಗೆ ಹೋಗುವುದೆಂಬುದನ್ನು

ಅವರು ಅರಿಯರು! ಕಣ್ಣಡಕಗಳನ್ನು ಧರಿಸಿದ ಗಾಡಿ-ಕುದುರೆಯಂತೆ ಅವರು ಹಲವೇ ದಾರಿಗಳ ಗತಿ ಗುರಿಗಳನ್ನು ಮಾತ್ರ ಬಲ್ಲವರಾಗಿದ್ದರು. ಹೊಸ ದಾರಿಗೆ ರಹದಾರಿ ಬೇಕಿಲ್ಲ ಎಂದುಕೊಂಡು ಅವರು ಅದನ್ನೇ ಹಿಡಿದರು.

ಅದೊಂದು ನೂರಡಿ ರಸ್ತೆ. ಎರಡು ಕಡೆಗಳಲ್ಲೂ ಖಾಲಿ ನಿವೇಶನಗಳು; ಆಟದ ಮೈದಾನಗಳು. ಅಲ್ಲಿ ಜನರ ಸುಳಿವೇ ಇರಲಿಲ್ಲ. ನಿನ್ನೆಯವರೆಗೂ ಸದಾ ತುರುತ್ ಕೆಲಸಗಳ ತೆಕ್ಕೆಯಲ್ಲಿ, ಟಪಟಪಿಸುವ ಟೈಪ್‌ರೈಟರುಗಳ ನಡುವೆ, ನರಳುತ್ತಿದ್ದ ರಾಯರಿಗೆ ಆ ವಿಶಾಲ ಪ್ರದೇಶದಲ್ಲಿ ಒಂಟಿಯಾಗಿ ತುಟಿಬಿಗಿದು, ಕೋಲೂರಿ ನಡೆಯುವುದೆಂದರೆ, ಬೇಜಾರಾಯಿತು. ಆದ್ದರಿಂದ ಅವರು ಮತ್ತೊಂದು ಚೌಕ ಸಿಕ್ಕಿದ ಕೂಡಲೇ ಮತ್ತೆ ಎಡಕ್ಕೆ ತಿರುಗಿದರು.

ಆ ರಸ್ತೆ ಅಷ್ಟು ಬರಿದಾಗಿರಲಿಲ್ಲ. ಗುಡಿಸುವವರೂ, ಹಾಲು ಮಾರು ವವರೂ, ರೈಲಿಗಾಗಿ ಜಟಕಾ ಹತ್ತಿ ಬೇಗ ಬಿಡಪ್ಪ ಎಂದು ಗಾಡಿಯವನಿಗೆ ಅಂಗಲಾಚುವ ಸಂಸಾರಿಕರೂ, 'ಶಿಶು ವಿಹಾರ'ಗಳಿಗೆ ಮಕ್ಕಳನ್ನು ಎಳೆ ದೊಯ್ಯುವ ಆಳುಗಳೂ, ಪ್ರಾತಃಕಾಲದಲ್ಲೇ ಜನರಿಗೆ ನಾನಾದೇಶಗಳ ಕ್ರಾಂತಿ ಸಮಾಚಾರಗಳಿಂದ ಭ್ರಾಂತು ಹಿಡಿಸುವ ಸಲುವಾಗಿ ಅವರ ಮನೆಯ ಬಾಗಿಲು ಗಳಿಗೆ ವೃತ್ತಪತ್ರಿಕೆಗಳನ್ನು ತಲುಪಿಸಲು ತತ್ತರಿಸುತ್ತ ಹೋಗುವ ಸೈಕಲಿಗರೂ ಅವರಿಗೆ ಅಲ್ಲಿ ಸಿಕ್ಕರು. ರಿಟೈರಾದರೂ ತಮಗೆ ಜೀವನದ ಗೊಂದಲದ ಗದ್ದಲ ಸಿಕ್ಕಿತಲ್ಲಾ ಎಂದು ರಾಯರು ಕೊಂಚ ಶಾಂತರಾದರು. ಗುಡಿಸುವವನೊಬ್ಬ ಕೈಮುಗಿದಾಗಲಂತೂ ಅವರು ಹಳೆಯ ಸಾಹೇಬತನದ ಸಹಜ ರೀತಿಯಲ್ಲೇ ತುಟಿಮೂಲೆಯನ್ನು ತುಸು ಮೇಲಕ್ಕೆತ್ತಿ ಅವನನ್ನು ಅನುಗ್ರಹಿಸಿದರು. ಆದರೆ, ಅವನು, ಗಂಟೆ ಎಷ್ಟು ಸಾಮಿ ಎಂದಾಗ, ರಾಯರು ಆ ಸಲಿಗೆಗೆ ಬೆಚ್ಚಿದರು.

ನೂರು ಮಾರು ದೂರ ಹೋದಾಗ, ದೂರದಲ್ಲಿ ಸ್ವಾಮಿನಾಥ್ ಕಾಣಿಸಿ ಕೊಂಡರು. ಅವನೂ ವಾಕಿಂಗ್ ಹೊರಟಿದ್ದ, ಅವನ ಡಾಕ್ಟರ ಸಲಹೆ ಮೇರೆ. ದೊಡ್ಡ ಮನುಷ್ಯರ ಕಾರುಗಳೆಲ್ಲ ನಿಜಕ್ಕೂ ಆಂಬ್ಯುಲೆನ್ಸ್ ಕಾರುಗಳೇ! ಅವು ಗಳಲ್ಲಿ ಸದಾ ಒರಗಿ ತಿರುಗುವುದರಿಂದ, ಮೈಯೆಲ್ಲ ಜಡ್ಡಾಗಿ, ಮಾಲೀಕನನ್ನು ಪದೇ ಪದೇ ಆಸ್ಪತ್ರೆಗೆ ಸಾಗಿಸುವುದೇ ಅವುಗಳ ಮುಖ್ಯ ಕೆಲಸವಾಗಿಬಿಡುತ್ತದೆ. ಕಾರನ್ನು ಕೊಂಡ ತಪ್ಪಿಗೆ ಪ್ರಾಯಶ್ಚಿತ್ತವಾಗಿ, ಅದನ್ನು ಮಾರಿ ತಿಂಬುವಷ್ಟು ವರಮಾನ ಇಳಿದ ಕೂಡಲೇ, ಅವರು ಬೆಳಗ್ಗೆ ಆರೋಗ್ಯವನ್ನು ಅರಸುತ್ತ,

ಬಿರುಬಿರನೆ ವಾಕಿಂಗ್ ಹೋಗುವುದು ವಾಡಿಕೆ. ಸ್ವಾಮಿನಾಥ್ ಇನ್ನೂ ರಿಟೈರಾಗಿರಲಿಲ್ಲ. ಆದರೂ ಅವನ ಸೋಮಾರಿತನದ ಪರಿಹಾರಕ್ಕಾಗಿ ವೈದ್ಯರು ನಡಿಗೆಯ ಶಿಕ್ಷೆಯನ್ನು ವಿಧಿಸಿದ್ದರು. ರಾಯರಿಗೆ ಆತನ ಮುಖಾಬಿಲೆ ಬೇಕಿರಲಿಲ್ಲ. ಅವನು ಖಂಡಿತವಾಗಿಯೂ ಆಫೀಸ್ ಸಮಾಚಾರವನ್ನೇ ಚರ್ಚೆಗೆ ಎಳೆಯುತ್ತಾನೆ. 'ನೀವಿಲ್ಲದಿದ್ದರೆ, ಆ ಇಲಾಖೆಯೇ ಹಾಳು!' ಎಂದು ಸ್ತೋತ್ರ ಮಾಡಿ, ತಮ್ಮನ್ನು ಹೊರದೂಡಿದವನ ತಂತ್ರಗಿಂತ್ರಗಳನ್ನು ತಿಳಿದುಕೊಂಡು ಲಾಲ್‌ಬಾಗ್‌ನಲ್ಲಿ ಡಂಗುರ ಹೊಡೆದು...."ಛೆ! ಯಾವುದಾದರೂ ಗಲ್ಲಿಗೆಬಿದ್ದು ತಪ್ಪಿಸಿಕೊಳ್ಳುವುದೇ ಮೇಲು—" ಎಂದು ರಾಯರು ಸಂದು ಹುಡುಕಿದರು.

ಅನುಕೂಲ ಸಂದು ಸಿಗುವುದರೊಳಗೆ, ಸ್ವಾಮಿನಾಥ್‌ನೇ ಎಡಗಡೆ ಸಾಲಿನ ಬಂಗಲಿಯೊಂದರೊಳಕ್ಕೆ ಪ್ರವೇಶಿಸಿದ! ಆದೊಂದು ಅಂಡರ್ ಕಾರ್ಯದರ್ಶಿಯ ಮನೆ. ಸದ್ಯ, ಇಬ್ಬರನ್ನೂ ತಟಾಯಿಸಿದ ಹಾಗಾಯಿತೆಂದು ರಾಯರು ಕಾಲಿಗೆ ಅಶ್ವಶಕ್ತಿ ಕೂಡಿಸುತ್ತ, ಕೈಯನ್ನು ಬಿಸಿ ಬಿಸಿಯಾಗಿ ಬೀಸಿಕೊಂಡು ಮುನ್ನಡೆದರು. ಆದರೆ, ಅವರಿಬ್ಬರೂ ಮನೆಮುಂದಿನ ಮಂಟಪದಲ್ಲೇ ನಿಂತು ಮಾತನಾಡುತ್ತಿದ್ದದ್ದರಿಂದ, ಅವರು ರಾಯರನ್ನು ಕಂಡು ಗುರುತಿಸಿ, ಹಲೋ! ಹಲೋ! ಎಂದು ಸಂಬೋಧಿಸಿ, ಅವರೊಡನೆ ಬಾಯಾಡಿಸುವ ಚಪಲದಿಂದ ಹೊರಬಂದರು. "ಓಹೋಹೊ! ಷುರುಮಾಡೇ ಬಿಟ್ಟಿದೀರಿ! ಯಥಾಪ್ರಕಾರ! ಪ್ರಭಾತಫೇರಿ........ಭಗವದ್ಗೀತೆಪಾರಾಯಣ ಮನೆಗೆ ಹೋದಮೇಲೋ, ಅಥವಾ ನಡೆಯುತ್ತಲೇ ಓದರುತ್ತೀರೋ?" ಎಂದು ಆ ಹಸುರೆಲೆಗಳು ನಮ್ಮ ತರಗೆಲೆಯನ್ನು ನೋಡಿ ನಕ್ಕುವು.

ಅವರಿಂದ ಹೇಗೋ ತಪ್ಪಿಸಿಕೊಂಡು ಹೊರಟಮೇಲೆ, ರಾಯರು ಹೆಚ್ಚು ದೂರ ಸಾಗಲಿಲ್ಲ. ನೇಸರು ಏರಿದಷ್ಟೂ ಬೀದಿಗಳಲ್ಲಿ ಜನರ ಓಡಾಟ ಹೆಚ್ಚುತ್ತದೆ ಎಂದು ಅವರು ಹೆದರಿದರು. ರಿಟೈರಾದ 'ವೃದ್ಧ ನಾರಿ'ಯರೆಲ್ಲ ಗಾಳಿಗಾಗಿ ಮೂಗರಳಿಸಿಕೊಂಡು, 'ತರುಣ ನಾರಿಯು'ರಿಗೆ ಪಾತಿವ್ರತ್ಯ ಬೋಧಿಸುವ ಸಮಯ ಅದು. ಅಂಥವರೆಲ್ಲಾದರೂ ಎದುರಿಗೆ ಸಿಕ್ಕಿದರೆ, ತಮ್ಮನ್ನೂ ಅವರ ಸಮಾಜಕ್ಕೆ ಸೇರಿಸಿಕೊಳ್ಳಲು ಹೊಂಚುಹಾಕುತ್ತಾರೆ, ಖಂಡಿತ! "ಏನು, ರಾಯರೆ! ತನು ಮನ ಹೇಗಿದೆ?" ಎಂದು ಕೇಳುತ್ತ ಕೈಹಿಡಿದು ಕುಲುಕಿ, "ಪೆನ್‌ಷನ್ ಬಂದ ಕೂಡಲೇ ಮುಕ್ಕಾಲು ಮೂರು ವೀಸೆ ಬೇಹುಷಾರಿ ಮಂದಿ,

ನೋಡಿ, ಒಂದು ತೆರನ ಕಡುಬೇಸರಿಕೆಯಿಂದ ಬಹು ಬೇಗ ಹಾಸಿಗೆ ಹಿಡಿಯುತ್ತಾರೆ. ಭಾರಿ ಭಾರಿ ವೈದ್ಯರ ಬಾಗಿಲು ಕಾಯುತ್ತ, ಅವರ ಹೊಸಲನ್ನು ಹೊನ್ನು ಮಾಡುತ್ತಾರೆ. ತಾವು ಈ ರೀತಿ ಕುತ್ತಕ್ಕೆ ತುತ್ತಾಗಬಾರದು! ಕೂನಿ ಪದ್ಧತಿಯ ಜಲಚಿಕಿತ್ಸೆಯನ್ನೋ, ನಾಮಸಂಕೀರ್ತನ ಪದ್ಧತಿಯನ್ನೋ ಅನುಸರಿಸುವುದೇ ಉತ್ತಮ, ಖರ್ಚಿನ ದೃಷ್ಟಿಯಿಂದ. ಅಲ್ಲದೆ ಹುಣಿಸೆಯ ಮರದಂತೆ, ತಾವೂನೂ ನರೆಯುತ್ತಾ ಜರೆಯುತ್ತಾ ಹುಳಿ ಹೆಚ್ಚಿಸಿಕೊಳ್ಳಬೇಕು. ಮೊಮ್ಮಕ್ಕಳ ಶುಶ್ರೂಷೆ, ತುಳಸಿ ವ್ಯವಸಾಯ, ಇಸ್ಪೀಟು ಪಾರಾಯಣ, ಪುರಾಣ ಶ್ರವಣ—ಇವುಗಳಿಗೆ ಅವಕಾಶವಿಲ್ಲದಿದ್ದರೆ, ಬೇರೆ ಯಾವುದಾದರೊಂದು ಹವ್ಯಾಸನನ್ನು ಕಟ್ಟಿಕೊಂಡು ಮಾಯಾಪ್ರಪಂಚಕ್ಕೆ ಮೊಳೆಹೊಡೆದುಕೊಂಡು ಕೂಡಬೇಕು. "ಸಹಸ್ರಶೀಷೋ ಪುರುಷಃ" ಅಂದರೆ, ಶೀಸೆಯಲ್ಲಿ ತುಂಬಿಬರುವ ಮಾಯೆಯಾದರೂ ಚಿಂತೆ ಇಲ್ಲ. ಮುಖ್ಯ, ಜೀವದ ಬೇರು ತಣ್ಣನೆಯ ಮಣ್ಣೊಳಗೆ ಆಳವಾಗಿ ತೂರಬೇಕು!.....ಇಲ್ಲದಿದ್ದರೆ, ತೆಂಕಣ ಕೋಣದ ರಭಸಕ್ಕೆದ್ದ ಬಿರುಗಾಳಿಗೇನೆ ಮಲಗಿ ಮುಲುಗಬೇಕಾಗುತ್ತದೆ...." ಎಂದು ಮುಂತಾಗಿ ಪ್ರಾರಂಭಿಸಿಬಿಡುತ್ತಾರೆ.

ಇದನ್ನೆಲ್ಲ ನೆನೆದಾಗ, ರಾಯರ ಪಾದ ತಾನಾಗಿಯೇ ಮನೆಯ ಕಡೆ ತಿರುಗಿತು. ಕೋಲನ್ನು ನೆಲಕ್ಕೆ ಊರದೆಯೇ ಅವರು ಬೇಗ ಬೇಗ ಮುಂಬರಿದರು. ಅವರ ಮೆದುಳೊಳಗೆ ಸಂದೇಹವೆದ್ದು ಚುಚ್ಚುತ್ತಲೇ ಇತ್ತು. "ಹೌದು! ಇಳಿವಯಸ್ಸಿನಲ್ಲೂ ಹುಳಿಯ ವರ್ಚಸ್ಸನ್ನುಳಿಸಲು ನಾನು ಪ್ರಯತ್ನ ಮಾಡಲೇಬೇಕು. ಮೂವತ್ತು ವರ್ಷದಿಂದ, ಯಾರದೋ ಎಳ್ಳು ಆಡಿಸಿ, ಯಾರಿಗೋ ಎಣ್ಣೆ ತೆತ್ತೆ....ನನ್ನ ಜೀವ, ಹಿಂಡಿ....ಛೆ! ಆ ಗಾಣವೇ ನನ್ನ ಪ್ರಾಣವಾಗಿ ಬಿಟ್ಟಿತ್ತು. ಅದರ ಕೀಚಲು ದನಿಯೇ ಕಿವಿಗೆ ಇಂಪೆನಿಸಿಬಿಟ್ಟಿತ್ತು. ಅದರ ಸುತ್ತಣ ತಿರುಗಾಟದಲ್ಲಲ್ಲದೆ ಇನ್ನೆತ್ತಣ ಸುಖ ಎಂದು ತೋರಿಬಿಟ್ಟಿತ್ತು. ಇಂದಿನಿಂದ ನಾನು ಯಾರಿಗಾಗಿ ಬದುಕಬೇಕು? ಯಾರಿಗಾಗಿ ಸುತ್ತಬೇಕು? ದಿನವೆಲ್ಲ ಸರಸುವನ್ನು ನೋಡುತ್ತ ಕುಳಿತರೆ, ಸರಸ ಜೀವನವೇ ಅಸಾಧ್ಯ. ಹೊರಗೆ ಬಂದರೆ, ಸಹತಾಪ! ಒಳಗಿದ್ದರೂ ಸಹ ತಾಪ ....ಚಂಚು ಒಬ್ಬಳಿಗೆ ಮಾತ್ರ ನನ್ನ ಮನೋಗತಿ ಅರ್ಥವಾಗುತ್ತದೆ. ಅವಳಿಷ್ಟು

ದರೂ ವಿದ್ಯಾವಂತಳು. ಅವಳದು ಬೆಂದ ತಲೆ; ಸರಸೂಗೆ ಏನೂ ತಿಳಿಯದು....ಹಸು....ಳೆ...." ಎಂದು ಮುಂತಾಗಿ ಯೋಚಿಸುತ್ತ, ಅವರು ಗೋಕುಲಕ್ಕೆ ತಿರುಗಿದರು.

ಹೆಜ್ಜೆ ಹೆಜ್ಜೆಗೂ, ಮನೆ ಸಮೀ-ಸಮೀಪಕ್ಕೆ ಸರಿಯಿತು. ಕಡೆಗೆ ಸಿಕ್ಕಿತು. ಊರುಗೋಲನ್ನು ಹಾಲಿನ ಮೂಲೆಗೆಸೆದು, ಸೋಫಾದಲ್ಲಿ ಕುಳಿತು, ನಡು ಬುರುಡೆಯ ಬಟ್ಟೆಲುಬಟ್ಟೆದ ಬೆವರನ್ನು ಒರಸಿಕೊಳ್ಳುತ್ತ, ಅವರು ಗಡಿಯಾರ ನೋಡಿದಾಗ, ಅದು....ನಿಂತುಹೋಗಿತ್ತು; ಕೀಲು ಕೊಡುವ ಜವಾನ ಹೊಸ ಸಾಹೇಬರ ಮನೆಗೆ ಪಲಾಯನವಾಡಿದ್ದ !....ಆದರೇನು? ಇನ್ನು ಮುಂದೆ, ರಾಯರು ಕಾಲಾತೀತರು. ಗಡಿಯಾರದ ಮುಳ್ಳನ್ನು ನೋಡಿಕೊಂಡು ಅವರು ಓಡಿಯಾಡಬೇಕಾಗಿಲ್ಲ. ಮನಬಂದಂತೆ, ಮನೆಯ ಕಾರ್ಯಕಲಾಪಗಳನ್ನು ಅಳವಡಿಸಿಕೊಳ್ಳಬಹುದು....

# ತಿರುವು ಕುರ್ಚಿ

ಮೇಜಿನಮೇಲೆ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಟಪಾಲನ್ನು ನಾರಣಪ್ಪನ ಅಭಾವದಿಂದ ರಾಯರೇ ಸೋಫಾದಲ್ಲಿ ಕುಳಿತಿದ್ದಂತೆಯೇ ಕೈನೀಡಿ ಎಳೆದಿರಿಸಿಕೊಂಡರು....ಎಂಥ ಶೋಚನೀಯ ಪರಿಸ್ಥಿತಿ!....ಅಂದಿನ ಟಪಾಲಿನಲ್ಲಿ ಸರ್ಕಾರದ ವಾಸನೆ ಈಷದಪಿ ಇರಲಿಲ್ಲ. ಅಪ್ಪಿತಪ್ಪಿಯಾದರೂ ಒಬ್ಬರೂ ಇಲಾಖೆಯ ಮಾತನ್ನಾಗಲಿ, ಬಡ್ತಿ ವರ್ಗ ಭತ್ಯ ನೌಕರಿ ಸ್ಯಾಂಕ್ಷನ್, ಇತ್ಯಾದಿಯ ಬೇಡಿಕೆಯನ್ನಾಗಲಿ ಅವರಿಗೆ ಕಳುಹಿಸಿರಲಿಲ್ಲ. ಕಾಣದ ರವಿಯನ್ನು ಕವಿಯೂ ಲೆಕ್ಕಿಸುವುದಿಲ್ಲ ಎಂದು ಅವರು ಹೇಳಿಕೊಂಡರು....ಐವತ್ತೈದಾಗಿ ರಿಟೈರಾದ ಕೂಡಲೇ ಕೈಸೇರುವ ಜೀವವಿಮಾ ಹಣದ ಗಂಟನ್ನು ಕರಗಿಸಲು ಹೊಂಚು ಹಾಕುವ ಅಶಕ್ತ ಪೋಷಕರಾದ ಮನೆ ಏಜಂಟರು, ಸೈಟು ಮಾರಾಟಗಾರರು, ಷೇರು ವ್ಯಾಪಾರಿಗಳು, ಸಂನ್ಯಾಸಿ ಮಠದವರು, ಅನಾಥಾಲಯದವರು, ಕ್ವ 'ಲೋನ' ಬ್ಯಾಂಕಿನವರು, ಮುಂತಾದವರ ಪತ್ರಗಳು ಅಲ್ಲಿ ಆರೇಳಿದ್ದುವು. ಕಡೆಗೆ....ರಾಯರ ಏಕಮಾತ್ರ ಸಂತಾನ, ನಾಗರಾಜ ಬೊಂಬಾಯಿಂದ ಬರೆದ ಒಂದು ಕಾಗದ!

ಅದನ್ನು ಓದುತ್ತ ಓದುತ್ತ, ರಾಯರ ಕಣ್ಣಲ್ಲಿ ನೀರು ತುಂಬಿತು.... ಅವನನ್ನು ಕರುಣಿಸುವುದಕ್ಕಾಗಿ ತಾವು ಆಚರಿಸಬೇಕಾಗಿ ಬಂದ ನಾಗ ಪ್ರತಿಷ್ಠೆ, ಅವನ ಜನನದ ರಾತ್ರಿ ತಾವು ನರಸುಗಳಿಗೆ ಕೊಟ್ಟ ನಮಸ್ಕಾರ, ಅವನಿಗೆ ಹುಟ್ಟಿದ ಹಬ್ಬ ಮಾಡಲು ಪಟ್ಟ ಶ್ರಮ, ಚೌಳಕ್ಕಾಗಿ ಏರಿದ ಬೆಟ್ಟ, ಸ್ಕೂಲಿಗೆ ಸೇರಿಸಿದ ಮೊದಲ ದಿನವೇ ಹುಡುಗರು ಉದುರಿಸಿದ ಅವನ ಹಲ್ಲು, ಅವನಿಗೆ ಪಾಠ ಹೇಳಿ ಸೋತ ಮೇಷ್ಟರುಗಳು, ಲೋವರ್ ಸೆಕಂಡರಿ ಪರೀಕ್ಷೆಯಲ್ಲಿ ಅವನಿಗೆ ಬಂದ ಲೋವೆಸ್ಟ್ ನಂಬರು, ಹೈಸ್ಕೂಲಲ್ಲಿ ಅವನು ಆಡಿದ ನಾಟಕಗಳು ಕಾಲೇಜಲ್ಲಿ 'ಹಾಕಿ' ಅವನ ಕಾಲು ಮುರಿದದ್ದು, ಊರು ಕೇರಿ ಸುತ್ತಿ ಸುದ್ದಿ ಎಬ್ಬಿಸುವವನಿಗೆ ವೃತ್ತಪತ್ರಿಕೆ ಬಾತ್ಮಿದಾರನ ಕೆಲಸವೇ ಒಪ್ಪ ಎಂದು ಮಾಸ್ಟರುಗಳು ಮಾಡಿದ ನಿರ್ಧಾರ, ಅವನ ಬೆಳವಣಿಗೆಯ

ಬಾತ್ಮಿ ತಿಳಿದು ವರ ಹುಡುಕಿ ಮನೆಗೆ ಬಂದ ಕನ್ಯಾಪಿತೃಗಳ ಗಡಣ—ಎಲ್ಲವೂ ರಾಯರ ಮನೋಭಿತ್ತಿಯ ಮೇಲೆ ಸಿನಿಮಿಸುತ್ತಾ ಬೆಳಗಿದುವು.

ನಾಗರಾಜನ ಮದುವೆ ರಾಯರ ಕುಟುಂಬ ಜೀವನದಲ್ಲಿ ಒಂದು ದುರಂತ ಘಟನೆ. ಅದುವರೆಗೂ ಮಗನ ಲಾಲನೆ ಪಾಲನೆಗಳನ್ನೆಲ್ಲ ನಿರ್ವಹಿಸುತ್ತಿದ್ದವಳು, ಸರಸು. ಸೊಸೆ ಮನೆಗೆ ಬರುತ್ತಲೂ ಹಿತ್ತಲ ಬಾಗಿಲಿಂದ ಚಂಚುವೂ ಬಂದಳು. ಆದರೂ ಚಂಚುವಿಗೆ ಆ ನವದಂಪತಿಯರ ಕಡೆಗಣ್ಣ ಶೃಂಗಾರದಿಂದ ಅಸೂಯೆ ಉಂಟಾಗಲಿಲ್ಲ. ಅವಳು ಅದನ್ನು ಕಂಡು ಪರೋಕ್ಷವಾಗಿ ಹಿಗ್ಗಿದಳು. ಹುಡುಗತನ ಸುಮ್ಮನಿರಿ, ಎನ್ನುವಳು. ಆದರೆ, ಸರಸು ಮಾತ್ರ "ತಾಯಿ–ಮಗ" ಸಂಬಂಧವನ್ನು ಕಡಿದುಹಾಕಿದ ಕುಡುಗೋಲು ಎಂದು ಸೊಸೆಯ ಮೇಲೆ ವಿಷ ಕಾರಿದಳು. ಅದರಿಂದಾಗಿ ತನ್ನ ಸೊಸೆಯನ್ನು ಹುಚ್ಚನಂತೆ ಪ್ರೀತಿಸುತ್ತಿದ್ದ ನಾಗರಾಜನ ಮೇಲೆ ಅವಳು ಜುಗುಪ್ಸೆ ತಾಳಿದಳು. ಮಗನ ಪಕ್ಷ ವಹಿಸಿದ್ದಕ್ಕಾಗಿ ರಾಯರ ವಿಷಯದಲ್ಲೂ ಸರಸು ಅಸಡ್ಡೆ ತೋರಹತ್ತಿದಳು. ಅದ್ದರಿಂದ ರಾಯರ ಸಂಸಾರವೆಂಬ ಪಾಯಸದಲ್ಲಿ ಮರಳು ಬೆರೆಯಿತು. ಚಂಚುವಿಗೂ ಕೂಡ ಅಕ್ಕನನ್ನು ತಿದ್ದಲಾಗಲಿಲ್ಲ.

ದೇವರ ಕೃಪೆಯಿಂದ ಧನಸ್ತಾಪಕ್ಕೆ ಎಡೆಯಿರದಿದ್ದರೂ ತಾಯಿಗೂ ಮಗನಿಗೂ ಆದ ಮನಸ್ತಾಪದಿಂದ ಮನೆಯೇ ಮುರಿದುಬಿತ್ತು. ಆ ಸಂಕಟ ರಾಯರ ಗಂಟಲಲ್ಲಿ ಸದಾ ಸಿಕ್ಕಿಕೊಂಡು ಅವರು ನುಂಗುವ ಅನ್ನಕ್ಕೆ ಅಡ್ಡ ಬರುತ್ತಿತ್ತು. ಸೊಸೆಗೆ ಗೃಹ ಪ್ರವೇಶ, ಅತ್ತೆಗೆ ಗ್ರಹ ಪ್ರವೇಶ ಎಂಬ ಗಾದೆಗೆ ತೀರ ವಿರೋಧವಾಗಿ, ಸರಸು ಸೀಸರ್‌ತನ ಸಹಿಸಲಾರದೆ ಆ ಹುಡುಗಿ ಬಾವಿ ಕಡೆ ಓಡಿದಾಗ, ಅವಳನ್ನು ಉದುಕಿಸಲು ಮಗ ಬೊಂಬಾಯಿಗೆ ತೆರಳಿದ. ತಮ್ಮ ನೌಕರಿಯ ಆಡಾವುಡಿಯಲ್ಲೂ ಅದನ್ನು ರಾಯರು ಮರೆತಿರಲಿಲ್ಲ. ಎಂತಹ ಲಲ್ಲೆಯಾಟದಲ್ಲೂ, ನಾಗರಾಜನ ಪಲಾಯನ ಚಿತ್ರ, ಅವರ ಮತ್ತು ಸರಸುವಿನ ನಡುವೆ ನಿಂತು ಇಬ್ಬರನ್ನೂ ಕುಕ್ಕುತ್ತಿತ್ತು. ರಾಯರಿಗೂ ರಾಯರ ಪತ್ನಿಗೂ ನಡುವೆ ದಿನ ದಿನಕ್ಕೂ ಆಳವಾಗುತ್ತ ಅಗಲವಾಗುತ್ತ ಬೆಳೆದ ಕಂದಕಕ್ಕೆ ನಾಗರಾಜ ಬೊಂಬಾಯಿಗೆ ಹೊರಟ ದಿನವೇ ಗುದ್ದಲಿ ಪೂಜೆ !....
ಅಂದು ಚಂದ್ರ ಗ್ರಹಣ, ರಾತ್ರಿ ಹತ್ತೂವರೆಯ ರೈಲು, ಇಂಟರ್ ತರಗತಿಯ ನೂಕುನುಗ್ಗಲು, ಮಂಕುದೀಪದ ಮಸುಕು, ಮಗ ಸೊಸೆ ಇಬ್ಬರೂ ಕಿಟಕಿ

ಒಳಗಿಂದ ರಾಯರಿಗೆ ಕೈಮುಗಿದರು. ಮಗನ ಮುಖದಲ್ಲಿ, "ಅಪ್ಪಾ! ನನ್ನನ್ನು ಮನ್ನಿಸು!" ಎಂಬ ದೀನಮುದ್ರೆ.... ಸೊಸೆಯ ಮುಖದಲ್ಲಿ, "ಮಾವನವರೇ! ನೀವು ಪಶುಸಮಾನರು! ನಿಮ್ಮನ್ನು ಮನ್ನಿಸಿದೇನೆ" ಎಂಬ ಅಭಯಮುದ್ರೆ.... ಶೀನಪ್ಪ ಪಕ್ಕದಲ್ಲಿರದಿದ್ದರೆ, ರಾಯರು ಅಂದು ಅತ್ತೇ ಬಿಡುತ್ತಿದ್ದರು.

"ಕಾಫಿ ಬೇಡವೇನು ಇವತ್ತಿನಿಂದ?" ಎಂಬ ಒಂದು ಪ್ರಶ್ನೆ ಕಿವಿಯನ್ನು ತಾಕಿದ ಕೂಡಲೇ ರಾಯರ ಕಣ್ಣಮುಂದಿನ ಚಲನಚಿತ್ರ ಕಟ್ ಆಯಿತು. ಅವರು ಎಚ್ಚತ್ತು ಕಣ್ಣುಜ್ಜಿಕೊಂಡರು. ಬಲಪಕ್ಕದ ಬಾಗಿಲುವಾಡದಲ್ಲಿ, ಚೌಕಟ್ಟಿನೊಳಗಣ ಚಿತ್ರದಂತೆ ನಿಂತಿದ್ದ ತಮ್ಮ ಧರ್ಮಪತ್ನಿಯನ್ನು ನೋಡಿದರು!

ಮುಂದೆ ತಮಗೆ ಉಳಿದ ಬಾಳನ್ನೆಲ್ಲ, ಕೊಂಚವೂ ವಿರಾಮವಿಲ್ಲದೆ, ಆಕೆ ಎದುರಿಗೆ ಕುಳಿತು ಕಳೆಯಬೇಕಾಗುತ್ತದೆ ಎಂಬ ಭಯಂಕರ ಸತ್ಯ ಆಗ ಅವರನ್ನು ತಿವಿಯಿತು.... ನಲವತ್ತು ವರ್ಷಗಳ ಹಿಂದೆಯೇ ಲಕ್ಷ್ಮೀವೇಂಕಟೇಶರ ಪ್ರೇರಣೆಯಿಂದ ಹಿರಿಯರು ಅವಳನ್ನು ಅವರಿಗೆ ಕೊಟ್ಟು ವಿವಾಹ ಮಾಡಿದ್ದರು. ತಾರುಣ್ಯದ ಹೊಸತನದಲ್ಲಿ ಬೆಳದಿಂಗಳೆಲ್ಲ ಬಿಸಿಲಾಗಿ ತೋರುತ್ತಿದ್ದಾಗ ನಲವತ್ತೈದು ರೂಪಾಯಿ ಸಂಬಳದ ನಿರಾಯಾಸದ ಪರ್ಮನೆಂಟ್ ಸರ್ಕಾರಿ ಕೆಲಸ ದೊರೆತ ಸಂತೋಷದಲ್ಲಿ, ಅವರ ದಾಂಪತ್ಯ ಜೀವನ ಒಂದೆರಡು ವರ್ಷ ಸುಲಲಿತವಾಗಿ ನಡೆದಿತ್ತು. ಮುಖ್ಯ, ಸರಸುವಿಗೆ ಅತ್ತೆಮಾವಂದಿರ ಅವಾಂತರವಿರಲಿಲ್ಲ; ತಮಗೆ ಅತ್ತೆಮಾವಂದಿರ ಆಧಾರವಿತ್ತು.... ಅಂದಮೇಲೆ ಸಂಸಾರ ಚಕ್ರಕ್ಕೆ ಬಾಲ್‌ಬೆಯರಿಂಗೂ ರಬ್ಬರ್ ಟೈರೂ ಇದ್ದಹಾಗೆ ತಾನೆ? ಮಾವನವರೋ ಲಾಯರು; ವಾದಿಸಿಂಹರು; ಪ್ರತಿವಾದಿಭಯಂಕರರು! ಆದ್ದರಿಂದ ಬಾಳೆಹಣ್ಣಿನ ಗಡಂಗಿನಲ್ಲೇ ಹುಟ್ಟಿ ಬೆಳೆದವಳು. ಅವಳು ಶೀತರೆ, ಮೂರು ಜನ ಆಳುಗಳು ಮುಖ ಒರಸಲು ಸಿದ್ಧರಾಗುವರು! ಸೊಂಪಾದ ಕುಳ್ಳು ಮೈ. ಆಗಿನ ಕಾಲಕ್ಕೆ ಅದೇ ಆದರ್ಶ ಗಜಗಮನೆ! ಗಂಡನಾದ 'ಮೇಷ್ಟರ ಮಗ' ಋಣವಿಮುಕ್ತನಾಗಿ ಗುಮಾಸ್ತೆಯ ಸವಿಜೀವನಕ್ಕೆ ತನ್ನ ತಂದೆಯ ನೂಕಿನಿಂದಲೇ ಏರಿದ್ದರಿಂದ, ಸರಸು ರಾಯರ ಭಾಗ್ಯವಿಧಾತಳಾಗಿ ಮೆರೆದಳು. ಬರಬರುತ್ತ ರಾಯರಮೇಲೆ ಸರಸು ತನ್ನ ಸಂಪೂರ್ಣ ಆಡಳಿತ

ಸ್ಥಾಪಿಸಿದಳು. ಹಲವು ಹೆಂಗಸರಲ್ಲಿ ಸತೀತ್ವಕ್ಕಿಂತ ತಾಯ್ತನವೇ ಪ್ರಬಲವಾದ ಪ್ರೇರಕಶಕ್ತಿಯಾಗಿರುತ್ತದೆ. ಇಂಥವರು ಹಾಲುಹಲ್ಲಿನ ಹಸುಗೂಸಾಗಿರುವಾಗಲೇ ಗಂಡು ಗೊಂಬೆಯನ್ನು ಮಗುವೆಂದು ನಂಬಿ ಅದರ ಪೋಷಣೆಯನ್ನು ಅಕ್ಕರೆಯಿಂದ ನಡೆಸುವರು. ಬೆಳೆಯುತ್ತ ಬೆಳೆಯುತ್ತ ಅವರ ವಾತ್ಸಲ್ಯ ಭಾವಕ್ಕೆ ಅಗತ್ಯವಾಗಿ ಬೇಕಾಗಿ ಬರುವುದು, ಒಂದು ಕೈಗೊಂಬೆ; ಗಲಾಟೆ ಎಬ್ಬಿಸದೆ ಒಂದು ಕಡೆ ಬಿದ್ದಿರುವ ಕೂಸು! ತಮ್ಮ ಶಿಕ್ಷಣ ಆರೈಕೆ ತಮ್ಮ ಜೋಗುಳಗಳಿಗೊಳಪಟ್ಟು, ತಾವು ಹಾಕಿಕೊಟ್ಟ ಮೇಲುಪಂಕ್ತಿಯನ್ನನುಸರಿಸಿ, ಕೆಳಗೆರೆಗಳ ಮೇಲೆ ಬರೆದಿಡುವ, ಹುಡುಗರು, ಅಂದರೆ ಗಂಡಂದಿರನ್ನೇ, ಅವರು ಬಯಸುವರು. "ಮಗು ಎಲ್ಲಿ? ಮಗು ಇನ್ನೂ ಏಕೆ ಮನೆಗೆ ಬಂದಿಲ್ಲ? ಮಗುವನ್ನು ಯಾವನಾದರೂ ಗುಮ್ಮಯ್ಯ ಚೂರಿ ಚೂರು ಮಾಡಿದರೆ ಏನು ಗತಿ? ದುಷ್ಟ ನಾರಿಯರು ತಮ್ಮಿಷ್ಟವ ಸಲಿಸಲೆಂದು ಅಟ್ಟಟ್ಟಿ ಬೆನ್ ಹತ್ತಿ ತಿರುಗುವರಲ್ಲಾ! ಮಗು ಮೂಗು ಹೀಗೆ ನಶ್ಯ ತಿಂದರೆ ಕಿವಿಗೆ ಕೇಡಲ್ಲವೇ? ಎಂಬ ಭೀತಿಗಳನ್ನು ಸದಾ ವ್ಯಕ್ತಮಾಡಿದರೇನೆ ಅಂಥವರಿಗೆ ತೃಪ್ತಿ......ಈ ರೀತಿ ರಾಯರನ್ನೇ ಎಂಟು ಹತ್ತು ವರ್ಷಗಳಿಂದ ಲೋಲನೆ ಲಾಲನೆ ಮಾಡಿ ಪಳಗಿಸಿದ ಅನಂತರ ನಾಗರಾಜ ಹುಟ್ಟಿದ್ದರಿಂದ, ಆ ಕುಮಾರ ಸಂಭವದಿಂದ ತಂದೆಯುರ ಮುಂದೆ ಸೇರಿದ ರಾಯರಿಗೇನೂ ರಿಯಾಯಿತಿ ದೊರೆಯಲಿಲ್ಲ. ಗಂಡ ಎಂಬ ಶಿಶುವಿಗೆ ಸಲ್ಲಬೇಕಾದ ಲಾಲನೆಗೆ ಅಡ್ಡವಾಗಿ ಇದೊಂದು ಬಂತಲ್ಲಾ, ಎಂಬ ವ್ಯಥೆಯೇ ಸರಸು ಮನದಲ್ಲಿ ಬಲವಾಯಿತು.

ಇನ್ನೂರು ಮುನ್ನೂರು ರೂಪಾಯಿ ಸಂಬಳ ತರುವ ಸಾಹೇಬರಾದ ಮೇಲೂ ಕೂಡ, ಅವಳು ಹೆಜ್ಜೆ ಹೆಜ್ಜೆಗೂ, ಕಜ್ಜ ಕಜ್ಜಕ್ಕೂ ತನ್ನ ಸಲಹೆಗಳಿಂದ ರಾಯರನ್ನು ಸಲಹಲು ಬಯಸಿದಳು. ನಿಂತರೆ ವಾತ, ಶೀತರೆ ಶೀತ ಕುಳಿತರೆ ಅಜೀರ್ಣ, ನಡೆದರೆ ಹಿಪ್ ತೀರಿಯ, ಮಲಗಿದರೆ ಮಲೇರಿಯ, ಕೆಮ್ಮಿದರೆ ದಮ್ಮು, ಎಂದು ಎಚ್ಚರಿಸುತ್ತಿದ್ದಳು. ನಾಗರಾಜನಿಗಿಂತ ರಾಯರೇ ತನ್ನ ಸಂಸಾರ ಸಾರಸರ್ವಸ್ವ! ರಾಯರ ಆಯುರಾರೋಗ್ಯ ವಿಲಾಸ ವಿಜಯಗಳಿಗೆ ತಾನೇ ಹೊಣೆ, ಎಂದು ಭಾವಿಸಿ ಅವಳು ಪತಿ ಹಿಂಸೆಗೆ ಪ್ರಾರಂಭಿಸಿಬಿಟ್ಟಿದ್ದಳು. ಮನೆಗೆ ಬಂದರೆ ಮಡದಿಯ ಕಾಟ, ಕಚೇರಿಗೆ ಹೋದರೆ ಕಂಟ್ರೋಲರ ಕಾಟ, ಎಂದು ರಾಯರ ಒಳ ಮನಸ್ಸು ಕುದಿಯುತ್ತಿತ್ತು. ಭೀಷ್ಮಾಚಾರ್ಯರಂತೆ,

ಅವರ ಶಯ್ಯೆಯೂ ಶರಶಯ್ಯೆ ಆಯಿತು. ತಮ್ಮ ಮನೆತನದ ಮಟ್ಟದ ಹುಡುಗಿ ಯನ್ನೇ ವರಿಸಬೇಕಾಗಿತ್ತೆಂದು ರಾಯರು ಅನೇಕಸಲ ಅಂದುಕೊಂಡಿದ್ದುಂಟು; ಉತ್ತರಕುಮಾರ ಹೇಳಿದಂತೆ, "ಸುರರಸತಿಯರನೊಲ್ಲೆವೆಮಗೆಮ್ಮರ ಮನೆಯ ನಾರಿಯರೆ ಸಾಕು" ಎಂದು ಅನೇಕಸಲ ಮಹಾಬಲರಾಯರು ಪಿಸು ಗುಟ್ಟಿದ್ದುಂಟು!

ರಾಯರ ವಿಷಯದಲ್ಲಿ ತಾಯ್ತನದ ಪ್ರೇಮವನ್ನು ತೋರಿಸುತ್ತಿದ್ದ ಸರಸು, ಕ್ರಮೇಣ ಗುರುವತಕ್ಕೇರಿ, ಅವರಲ್ಲಿ ಕುಂದು ಕೊರತೆಗಳನ್ನೇ ಹುಡು ಕುತ್ತ, ಅವುಗಳಿಗಾಗಿ ಮರುಗುತ್ತ, ತನ್ನ ಪ್ರತಿಷ್ಠೆಯನ್ನೇ ಸದಾ ಬೀರುತ್ತಿ ದ್ದಳು. ಅತೀ ಹತ್ತಿರ ನಮಸ್ಕಾರಕ್ಕೆಡೆಯಿಲ್ಲ, ಅರ್ಚಕನಿಗೆ ಗುಡಿಯಲ್ಲಿ ದೇವರೇ ಇಲ್ಲ ಎಂಬಂತೆ ರಾಯರ ವಿಷಯದಲ್ಲಿ ತಾತ್ಸಾರಬುದ್ಧಿ ಹೆಚ್ಚಿತು. 'ಎಳಗರು ಎತ್ತಾಗದೆ? ಹರ ಹರ! ಶ್ರೀ ಚೆನ್ನಸೋಮೇಶ್ವರಾ!" ಎಂಬ ಕನಿಕರದ ನಿಟ್ಟುಸಿರಿಗೆ ಸರಿಯಾಗಿ, ಎಳಗರುವಾಗಿದ್ದ ಅವರು, ಬರಬರುತ್ತಾ ಗೂಳಿಯ ಗುಟುರುತನವನ್ನು ತಾಳದೆ, ಕೇವಲ ಮೂಗುದಾರ ತೊಟ್ಟ ಎತ್ತಾಗಿಬಿಟ್ಟರು. ಮಹಾಬಲರಾಯರು ಈ ವಾಮನಮೂರ್ತಿ ಪಾದ ಬೆಳಸಿದ ದಿನದಿಂದ ಮಹಾಬಲಿಯಾಗಿದ್ದರು.

ಇತರ ಎಲ್ಲಾ ವಿಧವಾದ ಕಾರ್ಯಕಲಾಪಗಳನ್ನೂ ಮುಕ್ತಾಯಮಾಡಿ ಆತ್ಮಪರೀಕ್ಷಣಕ್ಕೆ ಕೂತ ಆ ಬೆಳಗ್ಗೆ, ತಮ್ಮ ಪರಿಶೋಚನೀಯ ಪರಿಸ್ಥಿತಿ ರಾಯರಿಗೆ ವೇದ್ಯವಾಯಿತು. ಮಹಾಬಲರಾಯರು ಬಾಗಿಲಲ್ಲಿ ನಿಂತಿದ್ದ ಹೆಂಡತಿಯನ್ನು ನೋಡಿದರು. ಆಕೆಯ ಆಕಾರ ವಿಪರೀತ ಕುಳ್ಳು, ಎನಿಸಿತು. ಮುಖದಮೇಲೆ ಕೋಪಾವೇಶ ಕುಣಿದಾಡುತ್ತಿತ್ತು. ಮೂಗಿನ ತುತ್ತತುದಿ ಕೋಪೋದ್ರೇಕದಿಂದ ಕೆಂಚಗಾಗಿ ಅದರಮೇಲಿನ ಬೊಟ್ಟು ಕಣ್ಣನ್ನು ಕೋರೈಸುತ್ತಿತ್ತು. ಹಲ್ಲನ್ನು ಕಟಕಟ ಕಡಿಯುತ್ತಿದ್ದಂತೆ ತೋರಿತು! ಅಂಥವಳ ಜೊತೆ, ಹೇಗಪ್ಪ ಮುಂದೆ ಏಗೋದು, ಎಂದು ಅವರು ಬೆಚ್ಚಿದರು.

"ಇವತ್ತಿನಿಂದ ಕಾಫಿ ಬೇಡವೇನು" ಎಂಬ ಅವಳ ಪ್ರಶ್ನೆಯಲ್ಲಿ ಅಡಕ ವಾಗಿದ್ದ ಭಾವನೆಗಳನ್ನೆಲ್ಲ ರಾಯರು ಬಿಡಿಸಿದರು. ಪೆನ್‌ಷನ್ ಹಣದಲ್ಲಿ ಹಿಂದಿ ನಂತೆ ಸಂಸಾರ ನಿರ್ವಹಿಸುವುದಸಾಧ್ಯ, ಎಂಬುದೊಂದು ಭಾವ. ವೃದ್ಧಾಪ್ಯ ದಲ್ಲಾದರೂ ಕೆಟ್ಟ ಅಭ್ಯಾಸಗಳನ್ನು ತೊರೆಯಲು ಸಂಕಲ್ಪಮಾಡಬೇಕು,

ಎಂಬುದಿನ್ನೊಂದು. ಆಗಲೇ ಹೊತ್ತು ಬಹಳ ಮೀರಿ ಮನೆಗೆ ಹಿಂತಿರುಗಿದೀರಿ, ನೆನಪಿರಲಿ, ಎಂಬುದೂ ಒಂದು ಭಾವನೆ! ಅಡಿಗೆಗೆ ಆಫೀಸ್ ಅಟ್ಟೆಂಡರ್ ಇಲ್ಲದೆ, ಸಂಬಳಕೊಡಲು ಇನ್ನು ಒಲ್ಲದೆ, ಸದ್ಯ ನೀವು ಕಾಫಿ ಬಿಟ್ಟರೆ, ಅದಷ್ಟು ಕೆಲಸ ನಮಗೆ ಮನೆಯಲ್ಲಿ ಕಡಮೆ, ಎಂಬುದೊಂದು! ಮೈಗೆ ಕಾಫಿ ಒಳ್ಳೆಯದಲ್ಲ ಎಂದು ತಾನು ಮಾಡಿದ ಬೋಧನೆ ಕಡೆಗೂ ತಲೆಯನ್ನು ಹೊಕ್ಕಿರುವಹಾಗೆ ಕಾಣಿಸುತ್ತದಲ್ಲಾ, ಎಂಬುದೂ ಒಂದು! ಕಾಫಿ ಬೇಡ ಅಂತ ಕೋಲು ಸಹಿತ ಬೆಳಗ್ಗೆ ಮನೆಯಿಂದ ಹೊರಬೀಳುವಾಗಲೇ ಒದರಿಬಿಟ್ಟಿದ್ದರೆ, ಒಲೆ ಮುಂದೆ ಅದನ್ನು ಕಾಯಿಸಿಟ್ಟುಕೊಂಡು ಕಾಯಬೇಕಾಗಿರಲಿಲ್ಲ ನಾನು, ಎಂಬುದಿನ್ನೊಂದು ಸೂಚನೆ!....

ಆಗ, ಸರಸುವಿನ ದೃಷ್ಟಿ ರಾಯರ ಮಡಿಲೊಳಗಿದ್ದ ಕಾಗದದಮೇಲೆ ಬಿತ್ತು. "ಯಾರಿಂದ ಕಾಗದ? ಹೇಳಿ!" ಎಂಬ ಆಜ್ಞೆಯೂ ತಕ್ಷಣವೇ ಆಕೆಯಿಂದ ಹೊರಟಿತು!

ನಾಗರಾಜನಿಂದ ಬಂದ ಕಾಗದ, ಎಂದರೆ, ದೊಡ್ಡ ಬಿರುಗಾಳಿ ಎದ್ದು, ಕಾಫಿಗೆ ಬದಲು ಕಾಳಕೂಟವೇ ಸಿದ್ಧವಾಗುವುದು, ಹಸಿದ ಹೊಟ್ಟೆ ತೋರಿಸಿದರೆ, ಮಸೆದ ಕತ್ತಿ ಎತ್ತಿದರು, ಎಂಬಂತೆ! ಚಂಚು ಕೂಡ ಮನೆಯಲ್ಲಿಲ್ಲದ ಸಮಯ. ಆದ್ದರಿಂದ, ರಾಯರು, 'ಯಾವನೋ ಒಬ್ಬ ಸಂನ್ಯಾಸಿ ವಿಪರೀತ ಗೋಳಾಡಿದಾನೆ ಈ ಕಾಗದದಲ್ಲಿ! ನಾನು ತುಂಬ ವಿರಕ್ತ; ನನಗೆ ಹಣ ಬೇಕು ಎಂದು ಬರೆದಿದಾನೆ' ಎಂದರು. ಏಕೆಂದರೆ, ಆ ದಿನದ ಟಪಾಲಿನಲ್ಲಿ ಅಂಥ ಒಂದು ಪತ್ರವೂ ಇತ್ತು. ಭಾರತವರ್ಷದಿಂದಲೇ ಪರಂಗಿ ಜನ ಅನೇಕ ಶತಮಾನಗಳಿಂದಲೂ ತಮ್ಮ ಸಂಸ್ಕೃತಿಯನ್ನೆಲ್ಲ ಕಸಿದುಕೊಂಡದ್ದು ಎಂಬ ಡಂಗುರ ಬಾರಿಸುವುದಕ್ಕಾಗಿ, ಪುರಾಣಾನಂದ ಎಂಬ ಸಂನ್ಯಾಸಿಗಳೊಬ್ಬರು ಲಂಡನ್ನಿನ ತಮಸಾ ನದೀ ತೀರದಲ್ಲಿ ಮಠವೊಂದನ್ನು ಸ್ಥಾಪಿಸಬೇಕೆಂದಿದಾರೆ. ಅದಕ್ಕಾಗಿ, ಧನದಾಹಗ್ರಸ್ತರಾದ ಆ ಮುನಿಗಳು ಊರೂರು ತಿರುಗಿ ಉಪನ್ಯಾಸ ಮಾಡುತ್ತಿದಾರೆ. ತಮ್ಮ ಇನ್‌ಷೂರ್ ಹಣದಿಂದ ಹತ್ತು ಸಾವಿರವನ್ನಾದರೂ ತೆತ್ತು ಅವರ ದಾಹವನ್ನು ಶಮನಮಾಡಬೇಕು....ಕುಬೇರನ ಪುಷ್ಪಕ ವಿಮಾನವೇ ಅಮೇರಿಕನರ ಡಕೋಟ! ಪಾಶುಪತವೇ ಪರಮಾಣು ಬಾಂಬು! ಮಕ್ಷಿಕ ದೇಶವೇ ಮೆಕ್ಸಿಕೊ! ಮಾರೀಚನೇ ಮಾರ್ಚ್, ಮಾರ್ಕ್ಸ್!

ಶಿಂಗ್ಲೀಶರೇ ಇಂಗ್ಲೀಷರು! ನೀಲನೇ ನೈಲ್ ನದೀ ದೇಶದ ಪ್ರಪ್ರಥಮ ಭೂಪ! ಗ್ರೀಸನ್ನು ಪಾಂಡ್ಯರಾಳುತ್ತಿದ್ದರು! ಕನ್ನಡದ ಕೊಟ್ಟಿಗೆಯೇ ಪರಂಗಿಯವರ ಕಾಟೇಜು! ಏಸು ಅರವವಾಡಿದ ಬಡಗಿ! ಮೆಕ್ಯಾವಲ್ಲಿ ಚಾಣಕ್ಯನ ಚಿಗುರು! ಷೇಕ್‌ಸ್ಪಿಯರ್ ಕಾಳಿದಾಸನ ದಾಸ! ಪೆನಿಸಿಲಿನೆಂಬುದು ಆಯುರ್ವೇದದ ತೊಗಟೆಮೇಲೆ ಮೂಡಿದ ಬೂಷಲು! ಎಂಬಿವೇ ಮುಂತಾದ ನಮ್ಮ ಕೀರ್ತಿ ಪತಾಕೆಗಳನ್ನೆಲ್ಲ ಲಂಡನ್ ನಗರದಲ್ಲಿ ಹಾರಿಸಿ ಬಿಳಿಯವರ ಕಣ್ಣು ಕುಕ್ಕಲು ನಿಶ್ಚಯಿಸಿದ್ದಾರೆ, ಎಂದೆಲ್ಲ ಆ ಸಂನ್ಯಾಸಿಯ ಗುಪ್ತ ಕಾರ್ಯದರ್ಶಿ ಬರೆದು, ಹಣ ಬೇಡಿದ್ದ.

ಸರಸು ಅಚ್ಚು ಕನ್ನಡವನ್ನು ಮಾತ್ರ ಬಲ್ಲಳು! ಅಂದರೆ, ಕೈಬರಹದ ಕನ್ನಡವನ್ನೋದುವುದು ಅವಳಿಗೆ ಬಹು ಕಷ್ಟ. ಆದ್ದರಿಂದಲೇ ಉಗ್ರ ಕನ್ನಡಿಗನಾದ ನಾಗರಾಜ ಇಂಗ್ಲಿಷಿನಲ್ಲೀ ತಂದೆಗೆ ಪತ್ರ ಬರೆಯುತ್ತಿದ್ದದ್ದು.... ಎಲ್ಲಿ ತಾಯಿ ಅದನ್ನು ಅಪ್ಪಿತಪ್ಪಿ, ಓದಿಬಿಡುವಳೋ ಎಂಬ ಭಯ!....ರಾಯರು ಹೇಳಿದ್ದು ಸರಿಯೋ ತಪ್ಪೋ ಎಂಬ ಗೋಜಿಗೆ ಸರಸು ಹೋಗಲಿಲ್ಲ. ಅವಳ ಹಟ ಇಷ್ಟೆ! ಹಾ, ಹೂ, ಎಂದು ನಿಧಾನಿಸದೆ, ಹೆಂಗಸರಿಗೂ ಬೇಕೆ ಮಂಗಳೂರು ನಶ್ಯ ಎಂಬ ಕುಚೋದ್ಯ ತೆಗೆಯದೆ, ಕೇಳಿದಾಗ, ಕೇಳಿದ ಕೂಡಲೇ, ಒಂದು ಉತ್ತರ ಬರಬೇಕು, ರಾಯರಿಂದ....ಗಂಡನಿಂದ....ಅಷ್ಟೆ!

ಬಿಸಿ ಆರಿದ್ದ ರಾಯರಿಗೆ, ಬಿಸಿ ಬಿಸಿ ಕಾಫಿ ಸಿಕ್ಕಿತು....ಅದನ್ನು ಕುಡಿದು ರಾಯರು ರೇಡಿಯೊ ರೂಮಿಗೆ ಹೋಗಿ, ಬಾಗಿಲು ಹಾಕಿಕೊಂಡು, ಅದರ ಕಿವಿ ನುಲಿಯದೆ, ನಾಗರಾಜನ ಕಾಗದವನ್ನು ಮತ್ತೊಮ್ಮೆ ಓದಿ ಮುಗಿಸಿದರು. ನಾಗರಾಜನಿಗೆ ತಂದೆಯನ್ನು ಕಂಡರೆ ಕನಿಕರವೇ. ಅವರಲ್ಲಿ ಯಾವ ತಪ್ಪೂ ಇಲ್ಲವೆಂಬುದೇ ಅವನ ಭಾವನೆ. ಆದ್ದರಿಂದ, ಆಗಾಗ್ಗೆ ಅವನು ಅವರಿಗೆ ಪತ್ರ ಬರೆಯುತ್ತಿದ್ದ. ಅವನ ಬೊಂಬಾಯಿ ಜೀವನದಲ್ಲಿ ಅವನಿಗೆ ಎದೆ ಇರಿತ ಅಥವಾ ಎದೆ ಕಿರಿತ ಸಂಭವಿಸಿದಾಗಲೆಲ್ಲ ಅವನು ಅವುಗಳ ವಿಷಯ ರಾಯರಿಗೆ ತಿಳಿಸುತ್ತಲೇ ಇದ್ದ. ಅವನನ್ನು ಹೊರನಾಡ ಬಾತ್ಮೀದಾರನಾಗಿ ಒಳಗನ್ನಡ ಪತ್ರಿಕೆಯೊಂದು ನಿಯಮಿಸಿದಾಗ, ಡಿಸ್ಮಿಸಿದಾಗ, ಅಲ್ಲಿಯ ಕರ್ಣಾಟಕ ಸಂಘದ ಕಾರ್ಯದರ್ಶಿ ಖಾಯಿಲೆ ಬಿದ್ದು ಆ ದಿನ ವಂದನಾರ್ಪಣೆಗೆ ಜನ ಸಿಗದೆ ತಾನೇ ಅದನ್ನು ಮಾಡಿದಾಗ, ಅವಳ ಸ್ನಾನಘಟ್ಟ ಮುಂದುವರಿದಾಗ, ಡಾಕ್ಟರೊಬ್ಬರು ಅವನ ಪರಿಶಿಷ್ಟವನ್ನು ಕಿಬ್ಬೊಟ್ಟೆಯಿಂದ ತೋಡಿ ತೆಗೆದಾಗ, ಅವನ ಆಯಕ್ಕಿಂತ

ವ್ಯಯ ಇಮ್ಮಡಿಸಿದಾಗ, ರಾಯರಿಗೆ ತಪ್ಪದೆ ಪತ್ರ ಬರುವುದು. ಸರಸುವಿಗೆ ತಿಳಿಸದೆಯೇ ಅವರು ಅವುಗಳಿಗೆ ಸೂಕ್ತ ಉತ್ತರಗಳನ್ನೂ ಹಿರಣ್ಯವನ್ನೂ ರವಾನಿಸುವರು.

ಗಂಡಹೆಂಡಿರಲ್ಲಿ ಗುಟ್ಟಿರಕೂಡದೆಂಬುದನ್ನು ಅನೇಕ ಕವಿಗಳಂತೆ ಹಲವು ಕಾದಂಬರಿಕಾರರಂತೆ, ರಾಯರೂ ಬಲ್ಲರು. ಆದರೆ, ಅವಳ ಬಾಯಿಗೆ ಬೆದರಿ, ರಾಯರು ತಮ್ಮ ಬಾಯಿಗೆ ಕುಕ್ಕೆ ಕಟ್ಟಿಕೊಂಡರು. ಅವಳಿಗೆ ಹೇಳದ ಗುಟ್ಟನ್ನು ತಮ್ಮೊಳಗೆ ಅದುಮಿ ಹಿಡಿಯುವುದು, ಅವರಿಗೆ ಬಲು ಹಿಂಸೆ ಕೊಟ್ಟಿತು. ನಾಲಗೆ ದಪ್ಪವಾಗಿ, ಗಂಟಲಲ್ಲಿ ಹುಣ್ಣೆದ್ದಿತು! ಮನುಷ್ಯ ಸಮಾಜ ಜೀವಿ. ಇತರರ ಮೆಚ್ಚುಗೆಯೇ ಅವನ ಉಸಿರು; ಹಸುರು ಗಿಡಗಳಿಗೆ ಬಿಸಿಲು ಎಷ್ಟು ಅಗತ್ಯವೋ, ಮನುಷ್ಯನಿಗೆ ಗೆಳೆತನವೂ ಅಷ್ಟೇ ಅವಶ್ಯಕ. ಕಳ್ಳ ತನ್ನ ಕನ್ನದ ಕಥೆಯನ್ನು ವಿವರಿಸುತ್ತ ಗೆಳೆಯನ ತೊಡೆಯನ್ನು ತಟ್ಟುತ್ತಾನೆ. ನಾಟಕದ ರಾಜ ಪಕ್ಕದ ಮನೆಯ ರಾಜನೊಂದಿಗೆ ತನ್ನ ನಟನ ಕೌಶಲವನ್ನು ಹೇಳಿಕೊಂಡು, ಕಿತ್ತ ಮೀಸೆಯನ್ನು ತಿರುವುತ್ತಾನೆ. ಕರೀಪೇಟೆಯಲ್ಲಿ ಕದ್ದು ಮಾರಿದ ಜಾಣತನವನ್ನು ದುರ್ವ್ಯಾಪಾರಿಗಳು, ಕತ್ತಲಲ್ಲೇ ಕಾಮಿನಿಯರೆದುರು ಕೊಂಡಾಡಿ ಖುಷಿಪಡುತ್ತಾರೆ. ಮಹಾಬಲರಾಯರಿಗೂ ತಮ್ಮೊಡನೆ ಅನುಕಂಪನವಮಾಡಬಲ್ಲ ಒಂದು ಟಿಂಪನ ಬೇಕಾಯಿತು....ಆದರೆ, ಸರಸು....?

ಶೀನಪ್ಪನಿದ್ದ; ಭಾವ! ಹಿರಿಯ! ಸರಿ. ಆದರೂ, ಅವನ ಕಿವಿಗೂ ಬಾಯಿಗೂ ಹತ್ತಿರದ ನಂಟು. ಕೇಳಿದ ಸಮಾಚಾರ ಬಹು ಗುಟ್ಟು ಎಂದು ಗೊತ್ತಾದ ಕೂಡಲೇ, ಅವನು ಅದನ್ನು ಅರೆಗಳಿಗೆಯಲ್ಲೇ 'ಹಸುವಿನ ಗುಡಿ'ಯ ಪ್ರತಿಯೊಂದು ಹುಲ್ಲುಮೆದೆಯಲ್ಲೂ ಪ್ರಕಟಿಸಿಬಿಡುವನು!

ಚಂಚು? ಅವಳು ನಿಜವಾಗಿಯೂ ಬುದ್ಧಿವಂತಳು. ಎಲ್ಲರ ಗೋಳನ್ನೂ ಮೆದುಳಿಗೆ ಭರ್ತಿಮಾಡಿಕೊಂಡು ತುಂಬಿದ ಕುಂಭದಂತೆ ಇರಲು ಅವಳು ಕಲಿತಿದ್ದಳು. ಸರಸು ಲಂಗ ಉಟ್ಟು ತಿರುಗುತ್ತಿದ್ದಾಗಲೆಲ್ಲ, ಅವಳ ತಂದೆ ಸಾಗರದಲ್ಲಿ ಲಾಯರಾಗಿದ್ದರು. ಆದ್ದರಿಂದ, ಅವಳು "ಆಟ....ಊಟ....ಓಟ" ಕಲಿತದ್ದು ಮಲೇರಿಯಾ ಮಧ್ಯದಲ್ಲಿ, ಮನೆಯಲ್ಲೇ! ಆದರೆ, ಚಂಚು ಹುಟ್ಟಿದಾಗ ಅವರು ಸಾಗರದಿಂದ ಮೈದಾನಕ್ಕೆ ಸರಿದಿದ್ದರು. ವರಮಾನ ಬಿಗುಮಾನ ಅಂತಸ್ತು ಪ್ರತಿಷ್ಠೆ ಪದವಿ ಎಲ್ಲದರಲ್ಲೂ ಮೇಲಕ್ಕೇರಿದ್ದರು.

ಆದ್ದರಿಂದ ಅವಳು ಎ.ಬಿ.ಸಿ.ಡಿ. ಕಲಿತು ಹೈಸ್ಕೂಲಿನ ಹೊಸಲನ್ನೂ ದಾಟಿದ್ದಳು. ಎಲ್ಲಕ್ಕಿಂತ ಮೇಲಾಗಿ ಚಂಚು ದುಃಖವನ್ನು ಕಂಡಿದ್ದಳು. ಅವಳ ಗಂಡ ಸಿಡುಕ, ಕುಡುಕ. ಗೆದ್ದ ಕುದುರೆ ಲದ್ದಿಯನ್ನೇ ಮೂಸುತ್ತ ಮದ್ರಾಸು ಊಟಿ ಬೆಂಗಳೂರು ಪೂನಾ ಬೊಂಬಾಯಿ ಬೀದಿಗಳಲ್ಲಿ ಓಡಾಡಿ, ಕರೀಕುದುರೆ ಬೆನ್ನಮೇಲೆ ಗಂಟು ಕೂರಿಸಿ ಒಂದೆಡೆ ಸಂಪಾದಿಸಿದ್ದನ್ನು ಇನ್ನೊಂದೆಡೆ ಕಳೆದು ಕೈಕೈ ಹಿಸುಕಿ ಕಡೆಗೆ ಹೊಟ್ಟೆ ಉರಿ ತಡಿಯಲಾರದೆ ಹೌರಾ ಸೇತುವೆಯಿಂದ ಗಂಗೆಗೆ ಧುಮುಕಿ ಉಚ್ಚೈಶ್ರವಸ್ಸಿನ ಲೋಕಕ್ಕೆ ತೆರಳಿದ್ದ!

ಪಾಪ! ಚಂಚು, ಕನಸೊಡೆದು ಕಂಗೆಟ್ಟು ಕಂಡವರ ಮನೆ ಸೇರಿ ಕದನ್ನ ತಿಂಬುವ ಕೋಟ್ಯಂತರ ಹೆಂಗಸರ ಗೋಳನ್ನು ಚೆನ್ನಾಗಿ ಅರಿತಿದ್ದಳು. ತನಗೆ ಮಕ್ಕಳಿಲ್ಲದಿದ್ದರೂ ಅವಳಿಗೆ ಮಕ್ಕಳೆಂದರೆ ಪ್ರೀತಿ! ತಾನು ಅಕ್ಕನ ಮನೆಯಲ್ಲಿ ಚೊಕ್ಕ ಭೋಜನ ಮಾಡುತ್ತಿದ್ದರೂ, ಮಿಕ್ಕ ಬಡವರ ಮೇಲೆ ಮಮತೆ. ರಾಯರ ಪ್ರತ್ಯೇಕ ಜೀವನದ ಪರದಾಟದಲ್ಲಿ ಅವಳಿಗೆ ಆಳವಿಲ್ಲದ ಸಹಾನುಭೂತಿ ಇತ್ತು. ನಾಗರಾಜ,ಅವನ ಅಪರೂಪದ ಹೆಂಡತಿ—ಇವರ ವಿಷಯದಲ್ಲಿ ಸರಸು ತನ್ನ ವೈರವನ್ನು ಸಾಧಿಸಿದಾಗ, ಚಂಚು ಊರಲ್ಲಿರಲಿಲ್ಲ. ಅವಳು ಆಗ ಮಂಗಳೂರು ಮೆಡಿಕಲ್ ಸ್ಕೂಲಲ್ಲಿ ಓದುತ್ತಿದ್ದಳು. ಕಡೆಯ ವರ್ಷದ ಪರೀಕ್ಷೆಯಲ್ಲಿ ಎರಡನೆಯ ಬಾರಿ ಫೇಲಾಗಿ ಅವಳು ಅಕ್ಕನ ಆಹ್ವಾನದಂತೆ ಹಾಸ್ಟಲಿಂದ ರಾಯರ ಮನೆಗೆ ಬಂದಾಗ, ಅತ್ತೆಸೊಸೆ ಪರಿಸ್ಥಿತಿ ವಿಷಮಿಸಿ ಹೋಗಿತ್ತು. ಈಗ, ಚಂಚು ರಾಷ್ಟ್ರೀಯ ಚಿಕಿತ್ಸಾಲಯದಲ್ಲಿ ಕೇವಲ ಐವತ್ತು ರೂಪಾಯಿ ಸಂಬಳಕ್ಕೆ, ಮೆಡಿಕಲ್ ಪರೀಕ್ಷೆ ಪಾಸುಮಾಡಿದವರಿಗಿಂತ ಶ್ರದ್ಧಾಭಕ್ತಿಯಿಂದ, ಕೂತು ಸೋತ ಅನುಭವ ವ್ಯಾಸಂಗ ಇವುಗಳ ಸಾಮರ್ಥ್ಯದಿಂದ ಬಡಬಗ್ಗರ ಸೇವೆಯನ್ನು ಸಲ್ಲಿಸುತ್ತಿದ್ದಳು. ಗಂಡ ಒಂದು ದಿನ ಕುಡಿದ ಅಮಲಿನಲ್ಲಿ ಅವಳನ್ನು ಮಹಡಿ ಮೆಟ್ಟಲುಗಳ ಮೇಲಿಂದ ಉರುಳಿಸಿದ್ದರಿಂದ, ಚಂಚುವಿನ ಬಲಗಾಲು ಕುಂಟಾಗಿಬಿಟ್ಟಿತ್ತು. ಆದರೂ, ಅವಳ ನಡತೆ ನೇರವಾಗಿಯೇ ಇತ್ತು! ಅವಳು ಆದರ್ಶ ಜೀವಿ. ಗೋಖಲೆಯರ ಉಪದೇಶವನ್ನು ಕೇಳಿಯೂ ಅದರಂತೆ ನಡೆಯಲಾಗದೆ ಸರ್ಕಾರಿ ಚಾಕರಿಯೊಳಕ್ಕೆ ಎಡವಿದ ತಮ್ಮನ್ನು ತಾವೇ ಹಳಿಯುತ್ತಿದ್ದ ಮಹಾಬಲರಾಯರಿಗೆ ಚಂಚುವಿನ ಸೇವಾಕಾರ್ಯದಲ್ಲಿ

ಅವಳಿಗೆ ಆಶ್ರಯವಿತ್ತು ಕಿಂಚಿತ್ತಾದರೂ ನೆರವಾಗಲು ಸಾಧಿಸಿದ್ದರಲ್ಲಿ ಅಮಿತವಾದ ಆನಂದ.

ಸರಸು—ಚಂಚು ; ಅಕ್ಕ—ತಂಗಿ ; ಕುಳ್ಳ—ಎತ್ತರ ; ನೆಲ-ಆಕಾಶ ಎಂದು ಅವರಿಬ್ಬರ ಕೀಳುಮೇಲುಗಳನ್ನೇ ರಾಯರು ಹತ್ತು ಹದಿನೈದು ವರ್ಷಗಳಿಂದಲೂ ತೂಗಿ ವಿಮರ್ಶಿಸುತ್ತಿದ್ದರು. ಜನರೆದುರಿಗೂ ಜನಾರ್ದನನೆದುರಿಗೂ ತಮಗಿಂತ ಉತ್ತಮವಾಗಿ ಜೀವನವನ್ನು ಸಾರ್ಥಕಮಾಡಿಕೊಂಡಿದಾಳಲ್ಲಾ, ಚಂಚು, ಎಂದು ರಾಯರು ಆಕೆಯನ್ನು ಒಂದು ತೆರನ ಬಟ್ಟಲುಗಣ್ಣಿ ಭಾವನೆಯಿಂದ ಕಾಣುತ್ತಿದ್ದರು. ಮನಕೊಪ್ಪದ ಮಡದಿ ಬಂದಮೇಲೆ ಆ ಮನೆಯ ಯಜಮಾನನಿಗೆ, ಎಲ್ಲಿಯ ಶಾಂತಿ ? ಎಂಥ ಸುಖ ? ಒಳಗೆ ಕಿಚ್ಚು ಕೂತಿರುವಾಗ, ಆತ ಸ್ವರ್ಗಕ್ಕೆ ಹೇಗೆ ಕಿಚ್ಚು ಹಚ್ಚಿಯಾನು ? ಆದರೂ, ಅವರು ಅಂದಿನವರೆಗೂ ಉಷ್ಟ್ರಪಕ್ಷಿಯಂತೆ ಕಚೇರಿ ಕಾಗದದ ಕಟ್ಟುಗಳೊಳಕ್ಕೆ, ಕಣ್ಣು ಕಿವಿ ಸಹಿತ ತಲೆ ತುರುಕಿ, ತಮ್ಮ ಪರಿಸ್ಥಿತಿಯ ವಿಷಮತೆಯನ್ನು ಇಲ್ಲವೆನ್ನಿಸಿಬಿಟ್ಟಿದ್ದರು. ಇನ್ನುಮುಂದೆ, ಹಾಗೆ ತಲೆಮರೆಯಿಸಿ ಬದುಕುವುದು ಆಗದ ಕೆಲಸ.

ಮಧ್ಯಾಹ್ನ ಕಳೆದು, ಎರಡು ಗಂಟೆಯ ಹೊತ್ತಿಗೆ ಆಸ್ಪತ್ರೆಯಿಂದ ಚಂಚು ಮನೆಗೆ ಬಂದಳು. ಸರಸುವಿಗೆ ತಿಳಿಯದೆ ಅವಳೊಂದಿಗೆ ನಾಗರಾಜನ ಕಾಗದದ ಪ್ರಸ್ತಾಪ ಎತ್ತಲು, ರಾಯರು ಬಹಳ ಶ್ರಮಪಡಬೇಕಾಯಿತು. " ನೋಡು, ಚಂಚು ! ನಾಗರಾಜ ಅವನ ಹೆಂಡತಿ ಸಹಿತ ದೊಡ್ಡಮಗಳೂರಿಗೆ ಬರುತ್ತಾನಂತೆ, ಅವಳ ಬಾಣಂತನಕ್ಕೆ, ತೌರುಮನೆಗೆ. ಸದ್ಯಃ, ಈ ಮಗುವಾದರೂ, ಉಳಿಯಬೇಕು. ಅಲ್ಲದೆ, ಮತ್ತೊಂದು ವಿಷಯ ! ಅವನೂ ಬೊಂಬಾಯಿಂದ ಇತ್ತ ಕಡೆ ಬಂದುಬಿಡುತ್ತಾನಂತೆ. ಇಲ್ಲೇ 'ಶಂಖವಾದ್ಯ' ಪೇಪರಿನವರು ಅವನನ್ನ ಕೆಲಸಕ್ಕಿಟ್ಟುಕೊಳ್ಳುತ್ತಾರಂತೆ.... ನೂರಿಪ್ಪತ್ತು ರೂಪಾಯಿ ಸಂಬಳಕ್ಕೆ " ಎಂದು ಹೇಳುತ್ತ, ರಾಯರು ಆನಂದಬಾಷ್ಪವನ್ನೊರಸಿಕೊಂಡರು. "ಅಷ್ಟರೊಳಗೆ ಅಕ್ಕನನ್ನ ಹದಮಾಡಬೇಕು ಸಾಧ್ಯವಾದರೆ... " ಎಂದು ಹೇಳುತ್ತ, ಚಂಚು ಹೊರಕ್ಕೆ ಕುಂಟಿದಳು. 'ನಿನಗೆ ಭ್ರಾಂತು!' ಎಂದು ರಾಯರು ನಿಟ್ಟುಸಿರು ಬಿಟ್ಟದ್ದು ಅವಳಿಗೆ ಕೇಳಿಸಲೇ ಇಲ್ಲ....ಆದರೂ, " ರಿಟೈರ್ಡ್ ಸಾಹೇಬರ " ಅಮ್ಮಾವರಿಗೆ ಹಿಂದಿನಷ್ಟು ದರ್ಪ ಇರುವುದಿಲ್ಲ

ಎಂಬ ತತ್ವವನ್ನೇ ನಂಬಿ, ಚಂಚು ಅಕ್ಕನ ಅಂತಃಕರಣದ ಚಿಕಿತ್ಸೆಯ ವಿಧಾನ ವನ್ನು ಯೋಚಿಸುತ್ತ, ಅಡಿಗೆ ಮನೆಯ ಕಡೆ ಪ್ರಯಾಣ ಬೆಳೆಸಿದಳು.

*　　*　　*　　*

ನಾಗರಾಜನಿಗೆ ಬಿ ಎಸ್‌ಸಿ. ಪದವಿ ಎಟುಕಲಿಲ್ಲ, ನಿಜ. ಆದರೂ, ಅವನು ಸ್ವದೇಶೀ ಪಿ.ಎಚ್‌.ಡಿ. ಗಳಿಗಿಂತ ಬುದ್ಧಿವಂತನಾಗಿದ್ದ. ಬೊಂಬಾಯಿಗೆ ಹೋದಾಗ, ಅವನು ಒಳ್ಳೆಯ ಕಟ್ವಾಳು; ಆದರೂ, ಉಪಕಾರಿ. ವಿಶ್ವ ಸಾಹಿತ್ಯ ವಿಹಾರಿ; ಆದರೂ, ಕನ್ನಡದ ಅಭಿಮಾನಿ. ತೀವ್ರ ವಾದಿ; ಆದರೂ ಮರ್ಯಾದಸ್ಥ. ಸರ್ವವ್ಯಾಪಿ, ಆದರೂ ದೇಶಾಭಿಮಾನಿ!

ಮೊಗಡೂರಿಂದ ನಾಗರಾಜ ಹೊರಟದ್ದೂ ಕೂಡ ಅವನ ಜಾಣತನ ವನ್ನೇ ಸೂಚಿಸುತ್ತದೆ....ಶಾಲಾ ಕಾಲೇಜುಗಳಲ್ಲಿ ಅವನು ಕೇವಲ ಕ್ರೀಡಾಸಕ್ತ ನಾಗಿದ್ದರೂ, ಮದುವೆಯಾದಮೇಲೆ ಅವನ ತಿಳಿವಳಿಕೆ ತಿಳಿಯಾಯಿತು. ಅವನ ಬಡಾಯಿ ಕಡಮೆಯಾಯಿತು; ಅಹಂಕಾರ ತಗ್ಗಿತು. ನಾಗರಾಜನಿಗೆ ಕನ್ನಡವೆಂದರೆ ಪ್ರಾಣ, ಅದೊಂದರಲ್ಲೇ ಅವನಿಗೆ ಕೈತುಂಬ ನಂಬರು ಬರು ತ್ತಿದ್ದದ್ದು! ಕನ್ನಡದ ಅಧ್ಯಾಪಕರು ತಮ್ಮ ವ್ಯಾಖ್ಯಾನ ಗಮಗಮಿಸಲು ಇಂಗ್ಲಿಷು ಒಗ್ಗರಣೆ ಹಾಕಿದರೆಂದರೆ, ಅವನು ತರಗತಿಯಿಂದಲೇ ಗಮಿಸಿಬಿಡು ತ್ತಿದ್ದನು. ತನ್ನ ಅಚ್ಚುಮೆಚ್ಚಿನ ಹಾಕಿ ಆಟಕ್ಕೆ ಅವನು ಸೊಟ್ಟಕೋಲಾಟ ಎಂದೇ ಹೆಸರಿಟ್ಟಿದ್ದನು. ಕನ್ನಡ ಬಲ್ಲವರೊಂದಿಗೆ ಅವನು ಕನ್ನಡದಲ್ಲೇ ಮಾತನಾಡು ವನು. ಇಂಗ್ಲಿಷ್ ಮಾಡಿಯಂ ತೆಗೆದುಕೊಂಡು, ಎಸ್ಸೆಸ್ಸೆಲ್‌ಸಿ ಪರೀಕ್ಷೆಗೆ ಕುಳಿತು ವಿದ್ಯಾ ಇಲಾಖೆಯ ಮುಖ್ಯಾಧಿಕಾರಿಯಿಂದ 'ಪಬ್ಲಿಕ್ ಸರ್ವಿಸಿಗೆ ಅರ್ಹಳು' ಎಂಬ ಮೆಚ್ಚಿಕೆ ಪಡೆದಿದ್ದ ಅವನ ಹೆಂಡತಿ ನೀರಜಳಿಗೆ ಇದರಿಂದ ತುಂಬ ಆಶಾಭಂಗವಾಯಿತು. ಪರಂಗಿಯವರಂತೆ, ತನ್ನ ಸಹಪಾಠಿಗಳ ಗಂಡಂದಿ ರಂತೆ, ನಾಗರಾಜ ತನ್ನನ್ನು ಡಿಯರಿ, ಫೆಯರಿ, ಡಾರ್ಲಿಂಗ್, ಏಂಜಲ್ ಎಂದು ಸಂಬೋಧಿಸುತ್ತಾ ಹಿಂಬಾಲಿಸದೆ, ಏನೇ, ಹೆಣ್ಣೆ, ಅತ್ತೆಯ ಮಗಳೆ, ಮಲ್ಲಿಗೆ ಅರಳೆ, ದೇವಿ, ಗರತಿ, ಎಂದು ಕರೆದಾಗ ಅವಳ ಕಣ್ಣಲ್ಲಿ ಕಿಡಿಹಾರಿತು. ಆದರೆ, ಅತ್ತೆ ಮನೆಗೆ ಬಂದಮೇಲೆ, ದಿನದಿನದ ಎಲ್ಲ ವ್ಯಾಜ್ಯಗಳಲ್ಲೂ ನಾಗರಾಜ ತನ್ನ ಪರವಾಗಿಯೇ ತಾಯೊಂದಿಗೆ ಕಾದು ಕೋಪಗೊಂಡಾಗ, ಅವಳು ಅವನ ಧೈರ್ಯಕ್ಕೆ ಬೆರಗಾಗಿ, ಅವನ ಕನ್ನಡ ಕೆಚ್ಚನ್ನು ಕೊಂಡಾಡಿದಳು.

ಬೊಂಬಾಯಲ್ಲಿ ಆಂಗ್ಲ ವ್ಯಾಪಾರ ಸಂಸ್ಥೆಯೊಂದರ ಮ್ಯಾನೇಜಿಂಗ್ ಡೈರಕ್ಟರಿಗೆ (ಅವರಿಗೆ ಬಿಕ್ಕಲು) ಶೀಘ್ರ ಲಿಪಿಗಾರನಾಗಿದ್ದ ತನ್ನ ಅಣ್ಣನಿಗೆ ವೆಂಗಡೂರು ಪರಿಸ್ಥಿತಿಯನ್ನು ತಿಳಿಸುವ ಕಾಗದವೊಂದನ್ನು ಅವಳು ನಾಗರಾಜನ ಅರಿವಿಲ್ಲದೆಯೇ ಬರೆದಿದ್ದಳು. ಅದನ್ನು ಓದಿದ ಕೂಡಲೇ, ಅವನು ತಂಗಿಯನ್ನೂ ಕರೆದುಕೊಂಡು ತನ್ನಲ್ಲಿಗೆ ಬರುವಂತೆ ನಾಗರಾಜನಿಗೆ ಆಹ್ವಾನ ಕಳುಹಿಸಿದ್ದ. ಹೀಗೆ, ಉಪಕಾರದಿಂದ ಬಂಧಿತನಾದ ನಾಗರಾಜನಮೇಲೆ ಅವನೂ, ನಂಟತನದಿಂದ ಬಂಧಿತಳಾದ ಅತ್ತಿಗೆಯ ಮೇಲೆ ಅವಳೂ, ಅಲ್ಲಿ ಪರಸ್ಪರ ಅಧಿಕಾರ ಚಲಾಯಿಸಲು ಅವಕಾಶವಾಯಿತು.

ಸಂಸ್ಥಾನದ ನಾಲ್ಕಾರು ಪತ್ರಿಕೆಗಳಿಗೆ ನಾಗರಾಜ 'ಬೊಂಬಾಯಿ ಬಾತ್ಮೀದಾರ'ನಾದ. ಆದರೆ, ಅವನಿಗೂ ಪತ್ರಿಕಾ ಕರ್ತರಿಗೂ ಬಿಕ್ಕಟ್ಟುಗಳ ಮೇಲೆ ಬಿಕ್ಕಟ್ಟುಗಳು ಬೆಳೆದುವು. ಅವರಿಗೆ ಬೇಕಾಗಿದ್ದದ್ದು ಅನಾಹುತಗಳು, ಆಸ್ಫೋಟನಗಳು, ಉಪನಯನ ಮಾಡಿಸಿದವರ ಹೆಸರು, ಊಟದ ಕೂಟಗಳಲ್ಲಿ ಹಾಜರಾಗಿದ್ದ ಬಿರುದಿಗರ ವಿಳಾಸ, ಇಲ್ಲಿಂದಲ್ಲಿಗೆ ಅಲ್ಲಿಂದಿಲ್ಲಿಗೆ ರೈಲಲ್ಲಿ ಪ್ರಯಾಣ ಮಾಡುವ ಭಾರಿ ಅಧಿಕಾರಿಗಳನ್ನು ನಿಲ್ದಾಣದಲ್ಲಿ ನಮಸ್ಕರಿಸಿ, ದೇಶಾವರ ಬೀರಿದವರ ವಿವರ....ಇತ್ಯಾದಿ! ಆದರೆ, ಅವನು ಕನಸು ಕಂಡ ಆದರ್ಶ ಪತ್ರಿಕೆಯಲ್ಲಿ ಸುದ್ದಿಗಿಂತ ಬುದ್ಧಿಯನ್ನು ತಿದ್ದುವ ವಿಷಯಗಳೇ ಹೆಚ್ಚಿರಬೇಕಾಗಿತ್ತು. ಮೋಟಾರ್ ನಡೆಯಿಸುವ ಒಬ್ಬ ಕುಡುಕ ಕಾಲುನಡಿಗೆಯ ಒಬ್ಬ ಕಿವುಡನ ಪಂಚಪ್ರಾಣಗಳಲ್ಲಿ ಮುಖ್ಯಪ್ರಾಣವನ್ನು ತೆಗೆದದ್ದಕ್ಕಿಂತ, ಸಾವಿರಾರು ದಡ್ಡರು ದಿನವೂ ಕಾರ್ ನಡೆಯಿಸುತ್ತಿದ್ದರೂ, ಲಕ್ಷೋಪಲಕ್ಷ ಜನ ನಡುರಸ್ತೆಯಲ್ಲಿ ವಿಹಾರಿಂಗ್ ಮಾಡುತ್ತಿರುವುದೇ ಸೋಜಿಗ! ಆಗೊಂದು ಹುಚ್ಚ, ಅಲ್ಲೊಬ್ಬ ರಾಕ್ಷಸ ನಡೆಯಿಸುವ ಚೂರಿಚಾಕು ಪ್ರಕರಣಕ್ಕಿಂತ, ಮತ ಬೇರೆಯಾದರೂ ಹಿತವೊಂದೇ ಎಂಬ ಜ್ಞಾನದಿಂದ ಕೋಟ್ಯಂತರ ಜನ ಕೂಡಿ ಬಾಳುವುದೇ ಸೋಜಿಗ! ಒಂದು ಅತ್ಯಾಚಾರಕ್ಕಿಂತ, ದೇಶದ ಬಹು ಭಾಗ ಜನರು ಆಚಾರವಂತರಾಗಿ ಬಾಳುತ್ತಿರುವುದೇ ಸ್ವಾರಸ್ಯವಾದ ಸುದ್ದಿ....ಒಡೆದು ಚೂರಾದ ಕನ್ನಡ ಕುಲವನ್ನು ನುಡಿಯೊಂದರಿಂದಲೇ, ನುಡಿಯಲ್ಲಡಕವಾಗಿರುವ ನಡೆಯೊಂದರಿಂದಲೇ, ನೆಲೆಯಾಗಿ ನಿಲ್ಲಿಸಲು ಸಾಧ್ಯವಾಗುವುದರಿಂದ, ಅದೇ ರೀತಿಯ ಪ್ರಯತ್ನವನ್ನು ಮರಾಠರೂ, ಗುಜರಾಥಿಯರೂ, ಬಂಗಾಳಿಗಳೂ ಹೇಗೆ

ನಡೆಸುತ್ತಿರುವರು ಎಂಬುದನ್ನು ಕನ್ನಡ ಪತ್ರಿಕೆಗಳು ಜನರಿಗೆ ತಿಳಿಸಬೇಕೆಂದು ನಾಗರಾಜನು ಅವನ ಧಣಿಗಳಿಗೆ ಬರೆಯುತ್ತಿದ್ದನು. ಆದರೆ, ಅವರಿಗದು ರುಚಿಸಲಿಲ್ಲ. ಕನ್ನಡ ವಿಶ್ವಕೋಶ, ಕನ್ನಡ ಚಲಚ್ಚಿತ್ರ ಪರಿಷ್ಕರಣ, ಕನ್ನಡ ವಿಶ್ವವಿದ್ಯಾನಿಲಯ, ಕನ್ನಡ ನಾಡಿನ ಏಕೀಕರಣ, ಕನ್ನಡ ಸಂಪತ್ತನ್ನು ಬೆಳೆಸುವ ಬಗೆ ಇವುಗಳ ವಿಷಯವಾಗಿ ಅವನು ಬೊಂಬಾಯಿಯಲ್ಲಿನ ಹಲವಾರು ಮೇಧಾವಿಗಳನ್ನು ಸಂದರ್ಶಿಸಿ ಸಲಹೆಪಡೆದು ತನ್ನ ಪತ್ರಿಕೆಗಳಿಗೆ ಬರೆದ. ಅದಕ್ಕೆ ಅವರು, "ನಿಮ್ಮ ಬಾತ್ಮಿಗಳನ್ನು ಓದಿದರೆ, ಬೊಂಬಾಯಲ್ಲಿ ಲಾಠಿಗರೂ ಲೂಟಿಗರೂ ಇಲ್ಲವೆಂದೇ ತೋರುವುದಲ್ಲಾ!" ಎಂದು ಅವನನ್ನು ಹೀಯಾಳಿಸಿ, ಸಂಭಾವನೆಯನ್ನು ಖೋತಾಮಾಡಿದರು. ಅವರ 'ಬೊಂಬಾಯಿ ಬಾತ್ಮೀದಾರ' ಬೇರೊಬ್ಬನಾದ.

ಕ್ರಮೇಣ, ನಾಗರಾಜನೂ ಹೊಟ್ಟೆಗೋಸ್ಕರ ಬುದ್ಧಿವಂತನಾಗಬೇಕಾಗಿ ಬಂತು. ಆದರ್ಶ ಸಾಧನೆಯಿಂದ ಅರೆಹೊಟ್ಟೆ ಕೂಡ ತುಂಬಲಾರದೆನಿಸಿತು.. "ಜನತೆಗೆ ಯಾವುದು ಬೇಕೋ, ಅದನ್ನೊದಗಿಸುವುದೇ ವೃತ್ತಪತ್ರಿಕೆಗಳ ಕರ್ತವ್ಯ" ಎಂದು ಅವನು ಕೆಳಜಾರಿದ. ಜನರ ಮಟ್ಟಕ್ಕಿಳಿದು ಅವರನ್ನೆತ್ತಬೇಕು; ಕೆಸರಲ್ಲಿ ಬಿದ್ದವನನ್ನು ಕೆಸರಿಗಿಳಿದೇ ಎತ್ತಬೇಕು, ಎಂದು ಹೇಳಿಕೊಂಡ. ಹುಲ್ಲು ತಿಂಬುವ ಹಸುವಿಗೆ ಯಾರಾದರೂ ಹಾಲು ಕುಡಿಸುತ್ತಾರೆಯೇ? ಮುಳ್ಳು ತಿಂಬುವ ಒಂಟೆಗೆ ಎಳ್ಳು ಕೊಡುವವ ಮುಟ್ಠಾಳ!—ಎಂದು ಅವನ ಭಾವನೂ ದನಿಗೂಡಿಸಿದ. ತರುಣರ ಆತ್ಮಾವಲಂಬನವನ್ನು ನಾಶಗೊಳಿಸುವ ವಾರಭವಿಷ್ಯದಿಂದ, ಮಾಲೀಕರಿಗೆ ಲಾಭ ಹೆಚ್ಚಿ ತನ್ನ ಸಂಬಳ ಸಲೀಸಾಗಿ ಪಾವತಿಯಾಗುವುದಾದರೆ, ಅದನ್ನು ಅಚ್ಚುಹಾಕಿ ಮಂಕುಬೂದಿಯನ್ನೆರಚಕೂಡದು ಎನ್ನಲು ತಾನೆಷ್ಟರವನು? ಎಂದು ಅವನು ಸಮಾಧಾನ ಹೊಂದಿದ. "ಕಡ್ಡಿ ತಡೆವುದೇ ಕಡಲ?"....ಎಂದು ಬಾರಿಬಾರಿಗೂ ಜಪಿಸಿ ಶಾಂತಿಪಡೆದ. ಬೆಳಗ್ಗೆ ಎದ್ದು ಪೋಲೀಸ್ ಸ್ಟೇಷನ್ನುಗಳು, ಆಸ್ಪತ್ರೆಗಳು, ಮ್ಯಾಜಿಸ್ಟ್ರೇಟ್ ಕೋರ್ಟುಗಳು, ಇವುಗಳನ್ನು ಸಂದರ್ಶಿಸಿ, ಅಲ್ಲಿಯ ಚಿತ್ರಹಿಂಸೆಗಳಿಗೊಳಗಾದ ಬಡಪಾಯಿಗಳ ವಿವರಗಳನ್ನು ಮೊಗಡೂರಿಗೆ ಕಳುಹಿಸುವನು. ರೈಲು ಸ್ಟೇಷನಿಗೆ ಹೋಗಿ, ಒಾದನೆಯ ತರಗತಿಯಿಂದಿಳಿಯುವ ಕನ್ನಡಿಗರ ಪಟ್ಟಿ, ಅದರಲ್ಲಿ ತಮ್ಮ ಸೀಠಗಳನ್ನು ಕಾದಿರಿಸಿರುವ ಕನ್ನಡಿಗ ದುಡ್ಡಿನ ಚೀಲಿಗರ ಪಟ್ಟಿ—ಇವು

ಗಳನ್ನು ಶೇಖರಿಸಿ ಕಳುಹಿಸುವನು. ಹೀಗೆ, ನಾಗರಾಜ ಅರೆಮನಸ್ಸಿನಿಂದ, ಒಂದು ರೀತಿಯ ಡೊಂಕುಸಲಾಮು ಜೀವನವನ್ನು ನಡೆಯಿಸುತ್ತ ಬಂದ.

ಅಕಸ್ಮಾತ್ತಾಗಿ, ಅವನಿಗೆ ತನ್ನ ಕನ್ನಡ ಪ್ರೇಮವನ್ನು ಶಾಂತಗೊಳಿಸುವ ಸಂದರ್ಭವೊಂದು ಒದಗಿತು. ಕನ್ನಡಿಗರಲ್ಲದ ಹಲಕೆಲವು ಹುಸರನ್ನೂ ಬಾಬಾಜಿಗಳನ್ನೂ ಕನ್ನಡಿಗರು ಪೂಜಿಸಿ ಅವರ ಅನುಯಾಯಿಗಳಿಗೆ ಕಾಣಿಕೆಯ ರೂಪದಲ್ಲಿ ತಮ್ಮ ಹಣದ ರಾಶಿಯನ್ನು ಚೆಲ್ಲುತ್ತಿರುವುದನ್ನು ಕಂಡು, ಆಗ್ರಹಗೊಂಡ ಹಲವರು, ಅಚ್ಚ ಕನ್ನಡ ನಾಡಾದ ಬನವಾಸಿಯ ಹತ್ತಿರದಲ್ಲಿ ಒಬ್ಬ ಜೋಗಿ ಇದ್ದನೆಂದು ಎತ್ತಿಕಟ್ಟಿ, ಆತ ಹೊರನಾಡಿಗರೆಲ್ಲರಿಗಿಂತ ತಪೋಬಲದಲ್ಲೂ ತತ್ತಪೋಬಲದಿಂದುಂಟಾದ ಶಾಪಾನುಗ್ರಹಶಕ್ತಿಯಿಂದಲೂ ಭಕ್ತಾದಿಗಳಿಗೆ ಅತೀವ ಉಪಯುಕ್ತ ವ್ಯಕ್ತಿ—ಎಂದು ಸಾರಿ, ಹಣ ಗಳಿಸಲು ಒಂದು ಸಂಘವನ್ನು ಸ್ಥಾಪಿಸಿದರು. ಆ ಜೋಗಿಗೊಂದು ಜೀವನ ಚರಿತ್ರೆ ಸೃಷ್ಟಿಮಾಡಲು ಯಾರ ಮೂಲಕವೋ ನಾಗರಾಜನಿಗೆ ಕರೆ ಬಂತು. ಬನವಾಸಿಯ ಪ್ರಾಚೀನತೆ, ಸತ್ಯ ದ್ವಾಪರ ತ್ರೇತಾಯುಗಗಳಲ್ಲಿ ಅದರ ಹೆಸರುಗಳು, ಅಲ್ಲಿ ಜನಮೇಜಯ ರಾಯನ ದರ್ಪಯಾಗ ನಡೆಸಿದ್ದು, ಅಲ್ಲಿದ್ದ ಬನವಾಸಿಗರೊಂದಿಗೆ ಸೀತಾ ರಾಮರು ಕಳೆದ ಸವಿವಾರಗಳು, ಅಲ್ಲಿನ ಒಂದು ಕಾಳಗದಲ್ಲಿ ಸಿಕ್ಕಿದ ಏಟಿನಿಂದ ಭಾರತದ ದಂತವಕ್ರ ಆ ಹೆಸರನ್ನು ಪಡೆದು ಹಿಂತಿರುಗಿದ್ದು, ವಾತವ್ಯಾಧಿ ಮುನಿಗಳು ಅಲ್ಲಿ ಆಶ್ರಮ ಕಟ್ಟಿದ್ದು....ಈ ಉಪಾಖ್ಯಾನಗಳಿಂದ ಪ್ರಾರಂಭಿಸಿ, ಅಲ್ಲಿಯ ಒಂದು ಬೋಳು ಗುಂಡುಕಲ್ಲಿಂದ ಸದರಿ ಜೋಗಿಯು ಎದ್ದು ಗಡ್ಡ ನೀವಿಕೊಂಡದ್ದು, ಹುಟ್ಟುವಾಗಲೇ ಅವರಿಗೆ ಎಪ್ಪತ್ತೆಂಟು ವರ್ಷವಾಗಿದ್ದದ್ದು, ಕೇವಲ ಕುರಿಕೋಣಗಳೇ ಅವರ ಶಿಷ್ಯರಾಗಿದ್ದದ್ದು, ಎಂದು ಮುಂದುವರಿಸಿ, ನಾಗರಾಜ ಹಲವಾರು ಸಾಧು ಸಂತರ ಜೀವನ ಚರಿತ್ರೆಗಳಲ್ಲಿ ತಾನು ಓದಿದ್ದ ಪವಾಡಗಳನ್ನೆಲ್ಲ ಆ ಜೋಗಿಯಿಂದ ನಡೆಸೇಬಿಟ್ಟ. ಹುಲಿಯ ಬಾಲ ಹಿಡಿದು ಅದರ ಬೆನ್ನಮೇಲೆ ಸವಾರಿಮಾಡಿದ್ದರಿಂದ ಪ್ರಾರಂಭಿಸಿ, ಅವರನ್ನು ನೀರಲ್ಲದ್ದಿ ಹಾಲಲ್ಲದ್ದಿ ಬೆಂಕಿಗೆ ನೂಕಿ ಬೆಟ್ಟ ಏರಿಸಿ ಆಕಾಶದೊಳಕ್ಕೆ ತೂರಿಸಿದ. ಕಂಡ ಕಂಡ ಹೊಳೆಗಳನ್ನೆಲ್ಲ, ಅಂಬಿಗನಿಗೆ ಅರು ಕಾಸು ಕೊಡದೆ, ಕಾಲುನಡಿಗೆಯಲ್ಲೇ ಆ ಜೋಗಿಯನ್ನು ದಾಟಿಸಿದ. ಅವರ ಅನುಗ್ರಹದಿಂದ ಪಿಶಾಚಿಗಳೋಡುವುವು; ಪೋಲೀಸರಿಗೆ ಜಾಡು ತಪ್ಪುವುದು; ಜೂಜಿನ ಕುದುರೆಗೆ ಚಣಕಶಕ್ತಿ ಮೂಡು

ವುದು; ಹೆಂಗಸರು ಗಾಂಧಾರಿಯಹಾಗೆ ಒಂದು ಹಡೆಯುವ ಬದಲು ನೂರು ಮಕ್ಕಳನ್ನು ಪಡೆಯುವರು; ಪಂಪ ಕವಿ ಬಯಸಿದಹಾಗೆ ಬಯಸಿದರೆ, ಬಯಸಿದ ಸ್ಥಳದಲ್ಲಿ ಬೇಕಾದ ರೂಪದಲ್ಲಿ ಪುನರ್ಜನ್ಮ ಲಭಿಸುವುದು....ಎಂದು ಸೋದಾಹರಣ ಬರೆದುಕೊಟ್ಟ. ಕಡೆಗೆ, ಆತ ಸತ್ತಿಲ್ಲವೆಂದೂ, ತನ್ನ ಗ್ರಂಥವನ್ನು ಓದುವ ಜನರಿರುವವರೆಗೂ ಸಾಯುವುದಿಲ್ಲವೆಂದೂ, ಭಕ್ತರ ಕಾಣಿಕೆಗಳನ್ನು ಕೂಡಿಹಾಕುತ್ತ ತನಗಾಗಿ ತನ್ನವರು ಕಟ್ಟಿರುವ ಗೋರಿಯ ಸುತ್ತ ಸುಳಿದಾಡುತ್ತಿರುವನೆಂದೂ ಸಾರಿದ. ನಮ್ಮ ಜನಕ್ಕೆ ಹೆಚ್ಚು ನಂಬಿಕೆ ಬರುವಂತೆ, ಜೋಗಿಯ ಶಿಷ್ಯಕೋಟಿಗೆ ಸೇರಿದವರು ಎಂದು ಹತ್ತಾರು ಪರಂಗಿ ಹೆಸರನ್ನೂ ಪುಸ್ತಕದ ಅಂತ್ಯದಲ್ಲಿ ಸೇರಿಸಿದ. ಬನವಾಸಿ ಜೋಗಿಯ ಖ್ಯಾತಿ ದಿಗಂತಕ್ಕೆ ಹಬ್ಬಿತು; ನಾಗರಾಜನ ಅಧಃಪತನ ಸಂಪೂರ್ಣವಾಯಿತು!

ಬೊಂಬಾಯಿ ವಾತಾವರಣಕ್ಕೆ ಬದಲಾಯಿಸುವ ಮೊದಲು, ನಾಗರಾಜ ಇಂಥ ಹೇಯ ಕೃತ್ಯಕ್ಕೆ ಕೈಹಾಕುವನೆಂದು ಒಬ್ಬರೂ ನಂಬಿರಲಿಲ್ಲ. ಅವನ ಬರೆವಣಿಗೆಗೆ ಬೆರಗಾಗಿ, ಜೋಗಿಯ ಜೀವನವೆಲ್ಲ ಕಟ್ಟುಕಥೆ ಎಂದು ಒಬ್ಬರೂ ಅನುಮಾನಿಸಲೇ ಇಲ್ಲ. ಕಾಲಕ್ರಮದಲ್ಲಿ ನಾಗರಾಜನೂ ಕೂಡ ಅಂಥ ಒಬ್ಬ ಮಹಾತ್ಮ ಇದ್ದನೆಂದು ಸಾಧಿಸಲು ಹೊರಟ. ಅದಕಾಗಿ ಅವನಿಗೆ ಸಾವಿರ ರೂಪಾಯಿ ಸಂಭಾವನೆ ದೊರೆಯಿತು. ಬನವಾಸಿ ಕಡೆ ಓಡಾಡುವ ರೈಲಿನವರಿಗೂ ಬಸ್ಸಿನವರಿಗೂ ಆದಾಯ ಹೆಚ್ಚಿತು. ಗೋರಿಯ ಸಂಸ್ಥಾಪಕರಿಗೆ ಅಪಾರ ಹಣ ದೊರೆಯಿತು. ಕನ್ನಡ ಕಾಸು ಕರ್ನಾಟಕದಲ್ಲೇ ಉಳಿಯಿತು. ಕನ್ನಡಿಗರನೇಕರಿಗೆ ಮನಶ್ಶಾಂತಿಯೂ ಲಭಿಸಿರಬೇಕು. ಏಕೆಂದರೆ, ತಿಂಗಳುಗಟ್ಟಲೆ ಅನ್ಯಾಯ ಅನೀತಿಗಳಿಂದ ಗಂಟುಮಾಡಿದ ಅವರು ಜೋಗೀ ಭಜನೆಯಿಂದ, ಅಂತರಂಗದ ಉರಿಗೆ ಮುಲಾಮು ಹಚ್ಚಿ, ಇನ್ನು ತಮಗೆ ನರಕ ಭಯವಿಲ್ಲವೆಂದು ಆತ್ಮವಂಚನೆ ಮಾಡಿಕೊಂಡು ಅಚ್ಚುಕಟ್ಟಾಗಿ ನಿದ್ದೆಹೋದರು.

ತನ್ನ ಲೇಖನಿಯಿಂದ ಇಂಥ ಕೀಳುಮಟ್ಟದ ಲೋಹವನ್ನು ತೆಗೆದ ಅನಂತರ, ನಾಗರಾಜನಿಗೆ 'ಶಂಖವಾದ್ಯ' ದ ಕಚೇರಿಯ ಕೆಲಸಕ್ಕೊಪ್ಪಿಕೊಳ್ಳುವುದು ತಪ್ಪೆನಿಸಲಿಲ್ಲ. ಬೊಂಬಾಯಿ ವಾಸದಿಂದ ಅವನ ಹೆಂಡತಿಯ ಆರೋಗ್ಯ ತುಂಬ ಕೆಟ್ಟಿತ್ತು....ಅವಳ ಮೈ ಅಲ್ಲೊಂದು ಬಾರಿ ಇಳಿಯಿತು. ೧೨೦ ಮೆಟ್ಟಲುಗಳ ಮೇಲೆ ಏಳನೆಯ ಮಹಡಿಯ ಹಿಂಭಾಗದಲ್ಲಿ ಗಾಳಿ ಬೆಳಕಿಲ್ಲದ ಇಟ್ಟಿಗೆ

ಪಂಜರದಲ್ಲಿ ಅವಳು ಕೊರಗಿ ಬೆಳ್ಳಗಾದಳು. ಅತ್ತಿಗೆಯೂ ಅವಳೂ ದಿನ ಬೆಳಗಾದರೆ, ವಾಗ್ಯುಟರಂತೆ ಕಾದಾಡಹತ್ತಿದರು. ಮಹಾಬಲರಾಯರು ರಿಟೈರಾದ ಸುದ್ದಿಯನ್ನು ಪತ್ರಿಕೆಯಲ್ಲೋದಿದಾಗ ನಾಗರಾಜನಿಗೆ ತನ್ನ ತಂದೆಯ ಷಷ್ಠ್ಯಬ್ದಪೂರ್ತಿ ಶಾಂತಿಗೆ ಇನ್ನುಳಿದಿರುವುದು ಐದೇ ವರ್ಷ, ಅವರ ವೃದ್ಧಾಪ್ಯದಲ್ಲಿ ತಾನೇ ಅವರಿಗಿರುವ ಒಂದೇ ಒಂದು ಊರುಗೋಲು, ಮನೆಯೊಳಕ್ಕೆ ಸೇರಿಸದೆ ಹೋದರೂ, ಒಂದೇ ಊರಲ್ಲಿ ಇದ್ದರೆ, ಅವರ ಯೋಗಕ್ಷೇಮವನ್ನು ವಿಚಾರಿಸುತ್ತಿರಬಹುದು ಎಂಬ ಯೋಚನೆ. ಅಲ್ಲದೆ, ಆಸ್ತಿಪಾಸ್ತಿಯನ್ನೆಲ್ಲ ಚಂಚುವಿನ ರಾಷ್ಟ್ರೀಯ ಚಿಕಿತ್ಸಾಲಯಕ್ಕೆ ಬರೆದಿಟ್ಟರೆ ತಮಗೆ ಕರಟವೇ ಗತಿ ಎಂದು ನೀರಜ ಜ್ಞಾಪಿಸಿದ್ದಳು. ಆದ್ದರಿಂದಲೇ, ಅವನು ಶಂಖವಾದ್ಯದ ಕರೆಗೆ ಕಿವಿಯಾಡಿಸಿ ವೆಂಗಡೂರು ರೈಲು ಹತ್ತಿದ್ದು.

'ಶಂಖವಾದ್ಯ' ಪತ್ರಿಕೆ ಪ್ರಾರಂಭದಲ್ಲಿ 'ಪಾಂಚಜನ್ಯ'ವಾಗಿತ್ತು. ಅದರ ಕೂಗಿಗೆ ಲಂಚಕೋರರೂ, ತುಳಿದು ತಿನ್ನುವವರೂ, ಒರಗಿ ಕೂಡುವವರೂ ಹೆದರಿ ನಡುಗುತ್ತಿದ್ದರು. ಆದರೆ, ನಾಗರಾಜನಂತೆ ಆ ಪತ್ರಿಕೆಯೂ ಕೂಡ ಕಾಲಕ್ರಮದಲ್ಲಿ 'ಬದುಕುವ ದಾರಿ'ಯನ್ನು ಹಿಡಿಯಿತು. ಶಂಖದೊಳಗಿದ್ದದ್ದೆಲ್ಲ ತೀರ್ಥ, ಎಂಬ ನಂಬಿಕೆಯಿಂದ ಓದುಬಲ್ಲ ಹಲವರ ಪೈಕಿ ನೀರಡಿಕೆ ಇದ್ದವರು ಅದನ್ನು ಓದಿ, ತಮ್ಮ ಅಭಿಪ್ರಾಯಗಳನ್ನು ಅದರಂತೆಯೇ ತಿದ್ದಿಕೊಂಡರು. ಮಹಾಬಲರಾಯರಿಗೆ 'ಶಂಖವಾದ್ಯ'ದ ಪರಿಚಯವಿರಲಿಲ್ಲ; ನಾಗರಾಜನಿಗೆ ನೂರಿಪ್ಪತ್ತು ರೂಪಾಯಿ ಕೊಡಬಲ್ಲ ಪತ್ರಿಕೆ ನಿಜವಾಗಿಯೂ ಐಶ್ವರ್ಯದಲ್ಲಿ ತೇಲಾಡುತ್ತಿರಬೇಕು; ಅಂದರೆ, ಲೋಕಪ್ರಿಯವಾಗಿರಬೇಕು, ಎಂದು ಅವರು ಊಹಿಸಿ, ಅದಕ್ಕಾಗಿ ಆನಂದಿಸುತ್ತ ನಿಶ್ಶಬ್ದದ ರೇಡಿಯೋ ರೂಂನಲ್ಲಿ ಕುಳಿತಿದ್ದರು.

* * * *

## ಆರಾಮದ ಕುರ್ಚಿ

ಅಕ್ಕನನ್ನು ಸರಿಪಡಿಸಬೇಕು, ಎಂದು ತನಗೆ ತಾನೇ ಯೋಚಿಸುತ್ತ, ಚಂಚು ಹೊರಡುತ್ತಲೂ, ರಾಯರು ಅಲ್ಲೇ ಇದ್ದ ಆರಾಮದ ಕುರ್ಚಿಯಲ್ಲಿ ಮಲಗಿ ಕಾಲು ನೀಡಿದರು. ಅಂದಿನವರೆಗೂ ಅವರು ಹಗಲೆಲ್ಲ ತಮ್ಮ ಪಾದಗಳಿಗೆ ಚೀಲ ತೊಡಿಸಿ ತೊಗಲು ಹೊದಿಸಿ, ಅವಕ್ಕೆ ಹೆಚ್ಚು ಶ್ರಮ ಕೊಡದೆ ತಿರುಗಾಡುತ್ತಿದ್ದರು. ಆದರೆ, ಬೆಳಗ್ಗೆ ಚೀಲವಿಲ್ಲದೆ, ಚಪ್ಪಲಿ ಹಾಕಿ, ಸುಮಾರು ಒಂದೂವರೆ ಮೈಲಿ ಸುತ್ತಿಸಿದ್ದರಿಂದ, ಅವೆರಡೂ ರಾಯರ ಕಣ್ಣಮುಂದೆ ಕೆಂಚಗೆ ಉರಿಯುತ್ತ ನುಲಿಯುತ್ತ ಅವರನ್ನೇ ದುರುಗುಟ್ಟಿ ನೋಡುತ್ತಿತ್ತು. ರಾಯರ ದೃಷ್ಟಿ ಕಾಲಿಂದ ಕಾಲಸ್ಥಿತಿಯ ಕಡೆ ಚಿಮ್ಮಿತು.... ಸರ್ಕಾರಿ ಚಾಕರಿಯ ಕಾವಲಿಯಿಂದ ತಪ್ಪಿಸಿಕೊಂಡು 'ವಿರಾಮ' ಹೊಂದಿದ ನಾನು, ಈಗ ಸಂಸಾರದ ಒಲೆಯೊಳಗೆ ಬಿದ್ದೆನಲ್ಲಾ !.... ನನಗೆಲ್ಲಿಯ ವಿರಾಮ ? ಎಲ್ಲಿಯ ಬಿಡುಗಡೆ? ಎಂದು ಅವರು ತಲೆಯಮೇಲೆ ತಣ್ಣಗೆ ಕೈಯಿಟ್ಟರು. 'ಶೀನಪ್ಪನ ಹಾಗೆ ನಾನೂ ಒಂಟಿಯಾಗಿದ್ದು ಬಿಟ್ಟಿದ್ದರೆ, ಸುಂಟರಗಾಳಿಯಹಾಗೆ ಸುತ್ತಾಡಬಹುದಾಗಿತ್ತು' ಎಂದು ಯೋಚಿಸಿದರು. ಕೂಡಲೇ, ತಮ್ಮ ಕೆನ್ನೆಗೆ ತಾವೇ ಹೊಡೆದುಕೊಂಡು, ಶಾಂತಂ ಪಾಪಂ, ಶಾಂತಂ ಪಾಪಂ ಎಂದು ಜಪಿಸಿದರು. "ಛೆ! ಛೆ!.... ಭಾವನಿಗೆ ಈ ಭಾಗ್ಯ ಬಂದದ್ದು ನನ್ನ ಅಕ್ಕನ ಅಕಾಲ ವಿಯೋಗದಿಂದ.... ನಾನು, ಈಗ, ಭಾವ ಸುಖವಾಗಿದಾನೆ ಅಂತ ಅಂದುಕೊಂಡರೆ, ಅಕ್ಕನಿಗೆ ದ್ರೋಹ ಮಾಡಿದಹಾಗೆಯೇ. ನಾನು ಭಾವನ ಹಾಗಿರಬೇಕು ಅಂತ ಆಸೆಪಟ್ಟರೆ, ಸರಸು !.... ಛೆ ! ಅವಳೂ ಅದೇ ರೀತಿಯ....! ಅಯ್ಯೋ ! ಎಂಥ ದುಷ್ಟ ನಾನು...." ಎಂದು ರಾಯರು ಪಶ್ಚಾತ್ತಪಿಸಿದರು. "ಪಾಪ! ನನ್ನ ಶುಶ್ರೂಷೆಯಲ್ಲಿ ಎಷ್ಟು ಶ್ರದ್ಧೆ ವಹಿಸುತ್ತಾಳೆ! ಸದಾ ಅದೇ ಚಿಂತೆ, ಅದೇ ಪೀಡೆ! ಆದರೂ, ತಿಳಿಯದು, ಅಷ್ಟೆ ! ಏನೂ ತಿಳಿಯದು ! ಮದುವೆಯಾದ ಮರುದಿನ, ಹಸೆಮೇಲಿದ್ದಾಗ, ಬೆನ್ನು ಬಾಗಿಸಬೇಡಿ, ನೆಟ್ಟಗೆ ಕೂತುಕೊಳ್ಳಿ, ಅಂತ ನನಗೆ ಹೇಳಿಲ್ಲವೆ, ಇವಳು ! ಆ ! ತಿಳಿಯದು.... ತಿಳಿಯದು ! ಎಲ್ಲ ನನ್ನ ಅಭ್ಯುದಯಕ್ಕಾಗಿಯೇ. ನನ್ನ ಶ್ರೇಯಸ್ಸಿಗಾಗಿಯೇ. ನಾಗರಾಜ ಇಲ್ಲೇ

ಪೋಲಿ ತಿರುಗುತ್ತಿದ್ದರೆ, ನನಗೆ ಅಪಮಾನ, ಅಂತ ತಾನೆ ಅವಳು ಅವನ ಹೆಂಡತಿಗೆ ಹಿಂಸೆ ಕೊಟ್ಟು, ಮೆಲ್ಲಗೆ ಅವನನ್ನ ಬೊಂಬಾಯಿಗೆ ಸಾಗಿಸಿದ್ದು. ಸರಸೂನೇ ಹೇಳಿಲ್ಲವೆ ಹಾಗಂತ, ನೂರುಸಲ? ಇಲ್ಲದಿದ್ದರೆ, ಅಷ್ಟು ಸುಲಭ ದಲ್ಲಿ ಹೊರಡುವ ಹುಡುಗನೇ ಅವನು? ಬುದ್ಧಿವಂತೆ, ಸರಸು!....ಸದ್ಯಃ, ನಾನು ರಿಟೈರಾದಮೇಲೆ ಸರಿಯಾದ ಕಾಲಕ್ಕೆ ನಾಗರಾಜ ಹಿಂತಿರುಗಿ ಬರು ತ್ತಿದಾನೆ....ಇನ್ನು ಅವನು ಏನು ಮಾಡಿದರೂ, ಹಿಂದಿನಷ್ಟು ಅಪಮಾನ ವಾಗದು, ನನಗೆ. ಗೋಖಲೆಯುವರು ಇಡೀ ಭಾರತಕ್ಕೇ ಸೇವೆ ಸಲ್ಲಿಸು ಅಂದರು. ....ನಾನು ಈ ಒಬ್ಬ ಹುಡುಗನನ್ನ ಸರಿಯಾಗಿ ತರಬೇತ್ ಮಾಡಲಿಲ್ಲ. ಎಲ್.ಟಿ. ಬೇರೆ, ನನ್ನ ಯೋಗ್ಯತೆಗೆ....ಅಂತು, ಹುಡುಗ, ತಾನೇ ಬುದ್ಧಿವಂತನಾಗಿ ನೂರಿ ಪ್ಪತ್ತು ರೂಪಾಯಿ ಸಂಬಳಕ್ಕೆ ಇಲ್ಲೇ ಇರುತ್ತಾನೆ....ಯಾರೂ ಯಾರಿಗೂ ಪಾಠ ಹೇಳಿ ತಿದ್ದುವಹಾಗಿಲ್ಲ! ತಿದ್ದರೇದಾತ್ಮನಾತ್ಮಾನಂ! ಅವನ ದಾರೀನ ಅವನೇ ತಿದ್ದಿಕೊಳ್ಳಬೇಕು. ಅವಳಿಗೂ ಅದನ್ನ ಕೇಳಿದರೆ, ಸಂತೋಷವಾಗು ವುದು....ಹೆತ್ತವರಿಗೆ ಹೆಗ್ಗಣವೇ ಮುದ್ದಾಗಿರುವಾಗ, ಇನ್ನು ಇವನ ವಿಷಯ ಕೇಳಿದರೆ....? ಪಾಪ! ಸರಸುವಿಗೆ, ಅವನು ಇಲ್ಲಿಗೆ ಬರುವ ಸಂಗತಿ, ಅವಳು ತೌರುಮನೆಗೆ ಹೋಗುವ ಸಂಗತಿ, ನಾನೇ ತಿಳಿಸಬೇಕಾಯಿತು. ಚಂಚು ಮೂಲಕ ಹೇಳಿಸಿದರೆ, ಅವಳಿಗೆ ನನ್ನ ಮೇಲೆ ಅವಿಶ್ವಾಸ ಅಧಿಕವಾಗುವುದಿಲ್ಲವೆ? ಚಂಚು, ಚಂಚು, ಅಂತ ಅವಳು ಆ ತಂಗಿಯನ್ನೇ ತನ್ನ ಮಂತ್ರಿಯಾ ಗಿಟ್ಟುಕೊಂಡಿರೋದು ನ್ಯಾಯ. ಆದರೆ, ನಾನೂ ಹಾಗೆ ಮಾಡಿದರೆ, ಅವಳಿಗೆ ಸಹಿಸುತ್ತದೆಯೇ? ಈ ವಿಷಯವನ್ನ ನಾನೇ ನೇರವಾಗಿ ನನ್ನ ಹೆಂಡತಿಗೆ ಹೇಳಬೇಕಾಯಿತು! ಹಾಳು, ಹೆಂಗಸರೆದುರು ಧೈರ್ಯವೇ ಉಡುಗಿಹೋಗುತ್ತೆ. ಯಾರದು ಅದು ಕಾಗದ, ಅಂತ ಅವಳೇ ಕೇಳಿದಾಗ, ನಮ್ಮ ನಾಗರಾಜನದು ಅಂತ ಹೇಳಿಬಿಟ್ಟಿದ್ದರೆ, ಏನು, ಮಹಾ ಗಂಡಸ್ತನ ಕಳಚಿಬೀಳುತ್ತಿತ್ತೆ? ಮೊನ್ನೆ ಮಿನಿಸ್ಟರ್ ಎದುರು ಸುಳ್ಳು ಸುಳ್ಳನ್ನೇ ಬಳುಕದೆ ಅಳುಕದೆ ಹೊಡೆದ ನಾನು, ಇವತ್ತು ಹೆಂಡತಿ ಎದುರು ನಿಜ ಹೇಳುವುದಕ್ಕೆ ಹಿಂಜರಿದೆನಲ್ಲಾ!....ಸಾಹೇಬ ನಂತೆ, ಸಾಹೇಬ! ಥೂ! ನನ್ನ ಜನ್ಮಕ್ಕೆ....ಸದ್ಯಃ, ಆಯಿತಲ್ಲ, ಸಾಹೇಬ ತನ! ಅಂದಹಾಗೆ, ಸರಸು ಕೂಡ ಪಾಪ....ಈಗ....ತಗ್ಗಿದಾಳೆ. ತಗ್ಗಿರಲೇ ಬೇಕು....ಅಮ್ಮಾವರು, ಸಾಹೇಬರ ಮನೆಯಾಕೆ, ಮಿಸಸ್ ಸರಸಮ್ಮ ಮಹಾ

ಬಲರಾವ್, ಬಿ ಎ., ಎಲ್.ಟಿ, ಬಿ ಎಲ್!....ಯಾರೂ ಇನ್ನು ಅವಳನ್ನು ಹೆದರಿ ಹೊಗಳುವಂತಿಲ್ಲ. ಪಾಪ....ಅವಳಿಗೂ ಕೂಡ ಇವತ್ತಿನಿಂದ ಇನ್ನೊಂದು ಜನ್ಮವೇ!....ಆಳಿಲ್ಲ; ಕಾರಿಲ್ಲ; ಅಡಿಗೆಯುವನಿಲ್ಲ!....ದೇವರು....ದಿಂಡರು.... ಭಕ್ತಿಗಿಕ್ತಿ ಇದೆ....ಆದರೂ ನನ್ನದೂ ತಪ್ಪಿದೆ! ಸರ್ಕಾರ ಯಂತ್ರದ ಒಂದು ನಟ್ಟಾಗಿ ನಾನು ಸೇರಿಕೊಂಡಮೇಲೆ, ಅದರ ಚಕ್ರಗಳೊಂದಿಗೆ ಗಿರ್ರನೆ ಸುತ್ತುತ್ತಿದ್ದೆನೆ ಹೊರತು, ಸರಸುವಿಗಾಗಿ ಅವಳ ಮನಸ್ಸಂತೋಷಕ್ಕಾಗಿ, ಅವಳಿಗೆಂದೇ ಏನೊಂದೂ ಮಾಡಿಲ್ಲ....ಪಾಪ....ಹೆಣ್ಮಗ! ನನ್ನನ್ನು ತಿರಸ್ಕರಿಸದೆ ಇಷ್ಟು ಅಕ್ಕರೆಯಿಂದ ನೋಡಿಕೊಳ್ಳುತ್ತಾ ಇದೆ!....ಕೈಹಿಡಿದವಳ ಕ್ಷೇಮಕ್ಕೆ ಯಾವತ್ತಾದರೂ ಒಂದು ಕೈತೋರಿಸಿ, ಲಕ್ಷಣ, ಅಂತ ನಾನು ಅನ್ನಿಸಿಕೊಳ್ಳಲಿಲ್ಲ. ಕಚೇರಿ ಕಂತೆಗಳನ್ನೆಲ್ಲ ಮನೆಗೂ ತಂದು, ಇಲ್ಲೂ ನನ್ನ ಸುತ್ತ ಕಾಗದದ ಕೋಟೆ ಕಟ್ಟಿಕೊಂಡು ಹೆಂಡತಿ ಮಕ್ಕಳನ್ನು ದೂರವಿರಿಸಿ, ದುಡಿದು ದುಡಿದು ಸವೆದೆ. ಚಂಚು ಹತ್ತಿರ ನಾನು ಇಂಗ್ಲಿಷಿನಲ್ಲಿ ಮಾತನಾಡಿದಾಗಲೆಲ್ಲ, ಪಾಪ, ಸರಸು, ಎಷ್ಟು ನೊಂದುಕೊಂಡಳೋ?....ಸರಿ! ಇನ್ನುಮೇಲೆ ಚಂಚುವೊಂದಿಗೆ ಇಂಗ್ಲಿಷಲ್ಲಿ....ಏಕೆ, ಕನ್ನಡದಲ್ಲೂ ಕೂಡ ಹೆಚ್ಚು ಮಾತಾಡಬಾರದು. ಮಾತಾಡುವಾಗ, ಸರಸೂನೂ ಇದ್ದರೆ, ವಾಸಿ. ಸರಸು ಹತ್ತಿರ ದಿನವೂ ಅರ್ಧ ಗಂಟೆ ಕಾಲವಾದರೂ ಲೋಕವಾರ್ತೆಗಳನ್ನು ಚರ್ಚೆಮಾಡಬೇಕು....ಅರ್ಧ ಗಂಟೆ?... ಬೇಡ! ಹಾಗೆ ನಿರ್ದಿಷ್ಟವಾಗಿ ಕಾಲಪರಿಮಿತಿ ಹಾಕಿಕೊಳ್ಳುವುದು ಬೇಡ....ನಡೆಸಲಾಗದ ಸಂಕಲ್ಪಗಳನ್ನು ಮಾಡದಿರುವುದೇ ಲೇಸು....ಆತ್ಮವಂಚನೆ ಘಾತಕ. ಆದರೂ, ಈ ನಾಗರಾಜನ ಕಾಗದದ ವಿಷಯವನ್ನ ಚಂಚು ಹೇಳುವಾಗ, ಸರಸು ಕನಿಕರ ತೋರಿಸುತ್ತಾಳೆ. ನನ್ನ ಹೆಸರಿಗೆ ಕೆಸರಂಟದಿರಲಿ ಅಂತ ತಾನೆ ಅವಳು ಅವನನ್ನ....ಈಗ, ಅವನೂ ಬುದ್ಧಿ ಕಲಿತಿದಾನೆ; ಹುದ್ದೆ ಕಸಿದುಕೊಂಡಿದಾನೆ....ಚಂಚೂನೂ ಜಾಣೆ! ಅಕ್ಕನ ಮನಸ್ಸನ್ನು ಸರಿಪಡಿಸುತ್ತಾಳೆ....ನಿಜವಾಗಿಯೂ, ಚಂಚು, ಎಂಥ ಆದರ್ಶ ಜೀವಿ!....ಗೋಪಾಲಕೃಷ್ಣ ಗೋಖಲೆ....ಈ ಗೋರ್ಕಲ್ಲಮೇಲೆ ನೀರ್ಕರೆದ....ಅಯ್ಯೋ!.... ಐವತ್ತೈದು....ಹುಂ!...." ಮನದಲ್ಲೇ ಮುಳ್ಳು ತಿನ್ನುತ್ತ, ಮಹಾಬಲರಾಯರು 'ನಿದ್ದೆ ಹೋದರು. ಕನಸು: ನಾಗರಾಜ ಆರು ವರ್ಷದ ಮಗುವಾಗಿ ಕೈಯ

ಲ್ಲೊಂದು ಶಂಖವನ್ನು ಹಿಡಿದು ತನ್ನೆದುರು ಕಚೇರಿಯ ಮೇಜಿನಮೇಲೆ ಕುಳಿತು ತನ್ನ ಕಿವಿಯ ಹತ್ತಿರ.... ಭೂಂ! ಭೂಂ.... ಭೂಂ....

ಮಹಾಬಲರಾಯರು ಕಣ್ಣು ತೆರೆದಾಗ, ಶೀನಪ್ಪ ಅವರೆದುರು ಕೂತು ಟೊಳ್ಳು ಟೊಳ್ಳಾಗಿ ಕೆಮ್ಮುತ್ತಿದ್ದ. "ಓ! ಭಂಗವಾಯಿತೆ? ಮಹೋಬ್ಲು!.... ನಿಜವಾಗಿಯೂ ಹೇಳುತ್ತೇನೆ, ನೀನು ನಿರಾತಂಕವಾಗಿ ಕಮ್ಮನೆ ನಿದ್ದೆ ಹೊಡೆಯುತ್ತಿದ್ದದ್ದು ನೋಡಿ, ನನ್ನ ಹೊಟ್ಟೆ ಉರಿಯಿತು. ಎಲಾ, ಇವನೆ! ಅರ್ಧಕ್ಕರ್ಧ ಸಂಬಳ ಖೋತಾ ಆದರೂ, ಹೀಗೆ ತೆಪ್ಪಗೆ ಥಪ್ಪಗೆ ಮಲಗಿ ಮನೋರಾಜ್ಯದಲ್ಲಿ ಮೆರವಣಿಗೆ ಮಾಡುತ್ತಿದಾನಲ್ಲಾ, ಅಂತ, ಅದಕ್ಕೇ, ಕೆಮ್ಮಿ ಎಬ್ಬಿಸಿದೆ."

"ಇಲ್ಲ ಇಲ್ಲ! ಮಧ್ಯಾಹ್ನ ನಿದ್ದೆ ಅಭ್ಯಾಸವಿಲ್ಲ ನನಗೆ! ಇವತ್ತು ಈ ಈಸಿ ಚೇರು...." ಎಂದು ರಾಯರು ಕ್ಷಮೆ ಬೇಡಿದರು.

"ಅದಕ್ಕೋಸ್ಕರವೇ ಅಂತ ಕಾಣುತ್ತೆ, ದೇವರಿಗೆ ಈಸಿಚೇರು ಹಾಕಿಕೊಡದೆ ಇರುವುದು, ಪುರಾಣಗಳಲ್ಲಿ, ದೇವಸ್ಥಾನಗಳಲ್ಲಿ! ಅವನು ಕಣ್ಣು ಮುಚ್ಚಿದ ಅಂದರೆ, ಜಗತ್ತೂ ತಣ್ಣಗೆ, ಅಂತ, ಅವನಿಗೆ ಸಣ್ಣದೊಂದು ವಟಪತ್ರ, ಒರಟಾದ ಒಂದು ಬೋಳುಬಂಡೆ, ಬಸವನ ಗೂನು, ಇಲಿ, ನವಿಲು, ಹಾವು ಇತ್ಯಾದಿ ಕೊಟ್ಟು, ಸದಾ ಎಚ್ಚರವಾಗಿರುವಹಾಗೆ ಏರ್ಪಾಟು ಮಾಡಿದಾರೆ....

ಅಂದಹಾಗೆ, ಬೆಳಗ್ಗೆ ವಾಕಿಂಗ್ ಹೊರಟಿದ್ದಿ, ಅಂತೆ! ಅದು ಗೊತ್ತಾದಾಗಲೇ ಅಂದುಕೊಂಡೆ ನಾನು, ಓಹೋ ಮಹೋಬ್ಲು ಬೆಳಗ್ಗೆ, ಸಂಧ್ಯಾವಂದನೆ, ಮಧ್ಯಾಹ್ನದ ನಿದ್ದೆ, ಸಂಜೆ ಆಂಜನೇಯನ ಗುಡಿ, ರಾತ್ರಿ ಫಳಾರ— ಎಲ್ಲ ಪ್ರಾರಂಭಿಸಿಬಿಟ್ಟಿರುತ್ತಾನೆ, ಅಂತ...."

"ಇದೇನಿದು? ನಿನಗೆ ಈ ಸುದ್ದಿ ಯಾರು ಹೇಳಿದರು?"

"ಲಾಯರ್ ಸೋಮಪ್ಪ ಹೇಳಿದ.... ಕಕ್ಷಿಗಾರ ಕಂಟ್ರಾಕ್ಟರ್ ಮುನಿಯಪ್ಪನಿಗೆ ಆ ಉದ್ದನೆಯ ಸಾನಿಟರಿ ಇನ್‌ಸ್ಪೆಕ್ಟರ್ ಹೇಳಿದನಂತೆ.... ಬೆಳಗ್ಗೆ ಬುಲ್ಲು ಟೆಂಪಿಲ್ಲ ಹತ್ತಿರ ಗುಡಿಸುತ್ತಿದ್ದಾಗ ನೀನು ಅತ್ತಕಡೆ ಹಾದುಹೋದೆಯಂತೆ.... ನೋಡು, ಭಾವ! ನಿನಗೆ ಯಾಕೆ ಈ ಸಂಚಾರದ ರೋಗ? ನಿನಗೇನು ಅಗ್ನಿಮಂದವಾಗಿದೆಯೇ? ವಾತ ಪಕ್ಷವಾಗಿದೆಯೇ? ಪಿತ್ತ ಕೋಶವಾಗಿದೆಯೇ?

ಮುದಿತನ ಅನ್ನೋದು ನಾವು ಬಾ ಅಂದರೆ ಬರುತ್ತದೆಯೇ ಹೊರತು, ತಾನಾಗಿಯೇ ಮೆಟ್ಟಿಕೊಳ್ಳುವುದಿಲ್ಲ.... ಕರ್ಜನ್ ತನ್ನ ಎಪ್ಪತ್ತೆರಡನೆಯ ವಯಸ್ಸಿನಲ್ಲಿ ಎರಡನೆಯ ಮದುವೆ ಮಾಡಿಕೊಂಡ.... ನಮ್ಮಲ್ಲೂ ಅಂಥವರಿದಾರೆ, ಕಪಿಹತ್ತಿರ ತಾರುಣ್ಯವನ್ನು ಕಡ ತೆಗೆದುಕೊಳ್ಳದೆಯೇ, ಅರವತ್ತಾದರೂ ಅರಳುತ್ತಾ ಇರುವವರು...."

"ಐವತ್ತೈದು ಅಂದರೆ, ವಾನಪ್ರಸ್ಥಕ್ಕೆ"

"ವಾನಪ್ರಸ್ಥ? ನನ್ನನ್ನು ನೋಡು, ನಿನಗಿಂತ ಆರು ವಯಸ್ಸು ಹೆಚ್ಚು.... ಇನ್ನೂ ಬ್ರಹ್ಮಚಾರಿ! ಸುಖವಾಗಿ ಮನೆಯಲ್ಲಿ ಕೂತು ಒಂದು ಪ್ರಗತಿ ಕಥೆ, ಒಂದು ಪತ್ತೆದಾರಿ ಕಾದಂಬರಿ, ಒಂದು ಸಿನಿಮ ಮಾಸಿಕೆ ಕೈಯಲ್ಲಿ ಹಿಡಿದು ಅದರಿಂದ, ತಂಪಾದ ಗಾಳಿ ಬೀಸುತ್ತಾ, ಇದ್ದರೆ, ಇನ್ನೂ ಮಾನವಾಗಿ ಇಪ್ಪತ್ತು ವರ್ಷ ಬದುಕಿದನಂತರ ವಾನಪ್ರಸ್ಥ ಅನ್ನಿಸುತ್ತೆ. ಆರೋಗ್ಯಕ್ಕೆ ಪ್ರೇರಕ ಅಜೀರ್ಣಕ್ಕೆ ಮಾರಕ, ಅಂತ ಮುನಿಸಿಪಾಲಿಟಿ ದಾರೀಲಿ ಹುಲ್ಲು ಬೆಳೆಯದೆ ಇರುವಹಾಗೆ ತುಳಿದು ಬೋಳುಮಾಡಬೇಡ, ಮಹೋಬ್ಲು!"

"ನೀನು ಹೀಗೆ ದಿನಕ್ಕೊಂದೆರಡು ಸಲ ಬಂದು ನನಗೆ ಕಾಯಕಲ್ಪ ಕುಡಿಸಿದರೆ...."

"ನೋಡು! ಎಂಥ ಜನ ಇದಾರೆ ಅಂತೀಯಾ ಈ 'ಹಸುವಿನಗುಡಿ' ಯೊಳಗೆ! ಬಹು ವಿಚಿತ್ರ! ಹಲ್ಲು ಕೊಟ್ಟ ದೇವರು ತಮಗೆ ಹುಲ್ಲು ಕೊಡಲಾರನೆ? ಇನ್ನೊಂದು ಪ್ರಾಣಿಗೆ ಒಂದಿಷ್ಟು ಹಿಂಡಿ ಸಿಕ್ಕರೆ, ಅವಕ್ಕಾಗದು. ಸುಮ್ಮನೆ ಕಿವಿ ನೆಟ್ಟಗೆ ನಿಲ್ಲಿಸಿಕೊಂಡು ಮೆಲುಕು ಹಾಕುತ್ತ ಒದ್ದಾಡುತ್ತವೆ.... ಬೆಳಗ್ಗೆ ನಾನು ಒಂದು ಸುತ್ತು ಹೋಗಿದ್ದೆ! ನಾನಾ ಪ್ರಕಾರ ಮಾತಾಡುತ್ತಾರೆ ಹಸುವಿನಗುಡಿಯವರು ನಿನ್ನ ವಿಷಯವನ್ನ! ಕೊನೆಯ ಬಂಗಲಿ ಕಡೆ ಮೊನ್ನೆ ಹೋಗಿ, ಅವರ ಕೈಗೆ ಕೈಕೊಟ್ಟು ಕುಲುಕಿದಾಗ, ನೀನು ಕೊಂಚ ಕಾವೂ ಕೊಟ್ಟುಬಿಟ್ಟಿದ್ದರೆ, ಎರಡು ವರ್ಷ ಜೀವದಾನಕ್ಕೇನೂ ಭಯವಿರಲಿಲ್ಲ, ಅಂತಾನೆ, ಮೂಕಸಿಂಗ್! ಈಗ ಪೇಚಾಡಿ ಫಲವಿಲ್ಲ, ಅನ್ನು! ನಿನ್ನಮೇಲೆ ಚಾಡಿ ಹೇಳುತ್ತಿದ್ದವನ ಮೋಡಿ, ಫಲಿಸದೆ ಇರುವುದಕ್ಕೆ, ನೀನೂ ಅವನ ಅಶ್ಲೀಲ ಪುರಾಣಾನೆಲ್ಲ ಹೊರಗೆಡಹಬೇಕಾಯಿತು, ಅಂತಾನೆ!.... ಯಾರು,

ಅಂತೀಯಾ?....ಶಿವಪ್ಪ! ನಿನ್ನ ಜಾಗ ಆಕ್ರಮಿಸಿಕೊಂಡವನ ಮಾನ ತೆಗೆಯಲು ಅವನೇ ನಿನಗೆ ಸಪ್ಲೈ ಮಾಡುತ್ತಿದ್ದನಂತೆ....ಎಷ್ಟು ಲವಾಜಮೆ ಬೇಕಾಗಿದ್ದರೂ, ಸಾಕ್ಷಿ ಸಹಿತ! ಮೊಗಡೂರಲ್ಲಿ ಈಚೆಗೆ ಇದಕ್ಕೊಂದು ಸಂಸ್ಥೆಯೇ ಪ್ರಾರಂಭವಾಗಿದೆಯಂತೆ. ಎಂಥೆಂಥವರ ಮುಖಕ್ಕೂ ಕೂಡ, ಮಸಿ ಬಳಿಯಲು ಅವರು ಸಾಹಿತ್ಯ, ಸಾಮರ್ಥ್ಯ, ಎಲ್ಲ ಸಿದ್ಧವಾಗಿಟ್ಟುಕೊಂಡಿದಾರಂತೆ....ಸದ್ಯಃ, ನೀನು ಸುರಕ್ಷಿತವಾಗಿ ಮನೆ ತಲಪಿದ್ದೇ ನಿಮ್ಮಪ್ಪ ಆ ಮೇಷ್ಟರು ಮಾಡಿದ ಪುಣ್ಯ, ಅಂತ ತೋರುತ್ತೆ ನನಗೆ, ಶಿವಪ್ಪನ ಮಾತು ಕೇಳಿದಾರಭ್ಯ!....ಆಮೇಲೆ, ಆ ಆಚಾರ್ರನ್ನ ನೋಡಿದ್ದೆ....ನೋಡಿದ್ದೆ, ಅಂದ್ರೆ, ಅವನೇ ಸಿಕ್ಕಿದ್ದ....ಅವನಿಗೆ ಖುಷಿ, ನಿನಗೆ ರಿಟೈರಾದದ್ದರಲ್ಲಿ!....'ನನ್ನ ಮಗ ಒಂದು ಹಂತ ಮೇಲಕ್ಕೇರಿದ' ಅಂದ. ನಾನು ಸಂಸ್ಕೃತದಲ್ಲೇ ಅವನಿಗೆ, 'ಹಂತ' ಎಂದೆ. ಆ ಹೆಂಟೆಗೊದ್ದನಿಗೆ ಅದು ಅರ್ಥವಾಯಿತೋ ಏನೊ?.... ಅವರ ಪಕ್ಕದ ಮನೆಯಾತ, ನಿನ್ನ ಭದ್ರಾವತಿ ಮಿತ್ರ ವಾಮನಮೂರ್ತಿ ಎಡಬಡಂಗಿ, "ಎಲ್ಲ ವಯೋಧರ್ಮ, ಶೀನಪ್ಪನವರೇ! ನನಗೆ ಕಿಂಚಿತ್ತೂ ದುಃಖವಿಲ್ಲ! ಬೆಟ್ಟ ಬಿಸಿಲಲ್ಲಿ ಬೇಯುತ್ತೆ, ಕತ್ತಲಾಯಿತು ಅಂಪರೆ ಚಳೀಲಿ ನಡುಗುತ್ತೆ, ಕಾಲಧರ್ಮ, ಇದಕ್ಕೆ ಯಾರು ಅಳುತ್ತಾರೆ?" ಎಂದ. ನಿನ್ನ ಸುತ್ತಳತೆಗೆ ಅವನು ಮಾಡಿದ ಟೀಕೆ ಕೇಳಿದೆಯಾ? ನನಗೆ ಸಹಿಸಲಿಲ್ಲ; ನಾನು, "ಹೆಬ್ಬೆಟ್ಟವೇನು? ಹೆಬ್ಬೆಟ್ಟೇನು ಎರಡಕ್ಕೂ ಉಂಟು ಹಗಲು ರಾತ್ರಿ! ಹುಷಾರಾಗಿ ಮನೆ ಸೇರಿಕೊ, ಮಗೂ! ದನ ಗಿನ ಓಡಾಟ ಜಾಸ್ತಿ, ಅಂದೆ."

"ಪೇಪರುಗಳಲ್ಲೂ ಬಂದಿದೆ ನಿನ್ನ ಸಮಾಚಾರ, ಆಗಲೇನೆ! ಸದ್ಯಃ, ನಿನ್ನೆ ಆ ಬೀಳ್ಕೊಡುವ ಸಮಾರಂಭದ ಸ್ವಾರಸ್ಯ ಬಂದಿಲ್ಲ. ಸುಮ್ಮನೆ, ಲೋಕಾಭಿರಾಮವಾಗಿ, ಯಾರು ರಿಟೈರಾದರೂ ಹಾಕುವಹಾಗೆ,—ಎಲ್.ಟಿ. ಪದವೀಧರರಾದರೂ, ರಾಯರು ಮೂವತ್ತು ವರ್ಷ ಮೂಗನಂತೆ ಕಮಿಷನರ್ ಆಫೀಸಿನಲ್ಲಿ ಕಚೇರಿ ನಡೆಸಿ, ಕಾಗದಗಳಿಗೆ ರುಜು ಅಂಟಿಸಿದರು; ಸುಲಿದ ಬಾಳೆಯ ಹಣ್ಣಿನಂತೆ ಅವರು ಯಾರ ಹಿಡಿತಕ್ಕೂ ಸಿಕ್ಕದೆ, ಸದಾ ಜಾರುತ್ತಿದ್ದರು; ಸತ್ಯ ಎಂಬುದು ಅತ್ಯಮೂಲ್ಯ ಪದಾರ್ಥವೆಂಬುದನ್ನು ಅರಿತಿದ್ದರಾದ್ದರಿಂದಲೇ, ಅದನ್ನು ಅಧಿಕಾರದ ಚಲಾವಣೆಯಲ್ಲಿ ಆದಷ್ಟು ಕಡಮೆ ವ್ಯಯ ಮಾಡುತ್ತಿ

ದ್ದರು. ಅಂತು ಇಂತು, ಭೂಭ್ರಮಣದ ದೆಸೆಯಿಂದ, ವರ್ಷಗಳ ಮೇಲೆ ವರ್ಷ ಸೇರಿ, ಐವತ್ತೈದಾಗಿ, ಅವರೂ ಪೆನ್ಷನ್ ಪಡೆದು, ಒಲೆ ಮುಂದೆ ಕೂತರು" ಎಂದು ಹಾಕಿದಾನೆ ಆ ತುಂಟ, "ಬಿಸಿಬಿಸಿ" ಸಂಪಾದಕ! ಅಷ್ಟಕ್ಕೇ ಬಿಟ್ಟನೆ! ನಿನ್ನದೊಂದು ಫೋಟೋ ಬೇರೆ ಹಾಕಿಬಿಟ್ಟದಾನೆ! "ನಮ್ಮಲ್ಲಿಂದ ರಿಟೈರಾದ ಅಧಿಕಾರಿಗಳನ್ನು ಆಮದುಮಾಡಿ, ತಮ್ಮ ಪ್ರಜೆಗಳಿಗೆ ಆರತಿ ಎತ್ತಿಸುವ ಉತ್ತರ ಭಾರತದ ಸಂಸ್ಥಾನಗಳಿಗೆ ಇದೀಗ ಸುಸಮಯ! ಮಹಾಬಲರಾಯರೆಂಬುವ ಮಹಾಸಾಧು ಮೊನ್ನೆ ರಿಟೈರಾದರು. ಅವರನ್ನು ಅತ್ತಕಡೆ ಸಾಗಿಸುವುದಾದರೆ ಅದಕ್ಕೆ ನಮ್ಮ ಅಡ್ಡಿ ಏನೂ ಇಲ್ಲ" ಎಂದು ಬರೆದಿದೆ, "ಮೆಣ-ಸುಜೀ-ರಿಗೆ" ಪತ್ರಿಕೆ! ಇನ್ನೊಂದು ತಮಾಷೆ, ಮಹೋಬ್ಬು! ಉಳಿದ ಪೇಪರುಗಳಿಗೆಲ್ಲ ನೀನು ಯಾರು ಎಂಬುದೇ ನೇರವಾಗಿ ಗೊತ್ತಿಲ್ಲ! ಹಸುವಿನಗುಡಿಯ "ತಲೆ-ಬಾಲ"ದಲ್ಲಿ ನಿನ್ನನ್ನ, ನನ್ನ ಭಾವನ್ಯೆದುನ, ಅಂತ ವಾಚಕರಿಗೆ ಗುರುತು ಹೇಳಿದಾರೆ. ಸರಸ್ವತೀ ಪೇಪರಲ್ಲಿ ನಿನ್ನನ್ನ ರಾಷ್ಟ್ರೀಯ ಚಿಕಿತ್ಸಾಲಯದಲ್ಲಿ ದೀನಸೇವೆ ಸಲ್ಲಿಸುತ್ತಿರುವ ಡಾ|| ಚಂಚಲಾ ಅವರ ಬಿ-ಇನ್-ಲಾ, ಅಂತ ಹೇಳಿದಾರೆ. "ಮೋಟಾರ್" ಪೇಪರಲ್ಲಿ ಅವನು, ಮೇಗಡೂರಿನ ಅತೀ ಪುರಾತನ ಗ್ರಾಹಂಕಾರಿನ ಒಡೆಯರೆಂದು ದಾರಿಗರಿಗೆಲ್ಲ ಪರಿಚಿತರಾಗಿದ್ದ ಮಹಾಬಲ ರಾಯರು, ಮೊನ್ನೆ ಅರ್ಧ ಸಂಬಳಕ್ಕಿಳಿದದ್ದರಿಂದ ಆ ಕಾರನ್ನು ಮದರಾಸಿನವರೊಬ್ಬರಿಗೆ ಮಾರಿದರೆಂಬ ಸಂತೋಷ ಸುದ್ದಿಯನ್ನು ಹಾಕಿದಾನೆ "ಆಟ-ಓಟ"ದಲ್ಲಿ ನೀನು ನಮ್ಮ ಹಾಕಿ ಹುಂಜ ನಾಗರಾಜ್‌ರವರ ತೀರ್ಥರೂಪು! ........ಇನ್ನು ಕೆಲವು ಪೇಪರುಗಳು ನಿನ್ನನ್ನ ಪೋಲೀಸ್ ಮಹಾಬಲಪ್ಪ ಅಂತ ತಿಳಿದುಕೊಂಡು ಯದ್ವಾತದ್ವ ಬೊಗಳಿವೆ. ಶಂಖವಾದ್ಯ ಒಂದು ಮಾತ್ರ "ನಿನ್ನಂಥವರು ಅಪರೂಪ, ನಿನ್ನಲ್ಲಿ ಇನ್ನೂ ಯಾರೂ ಕಾಣದ ಬುದ್ಧಿ ಇದೆ. ಇಂಥಿಂಥವರು ಇದಾರೆ ನಮ್ಮೂರು ಕಚೇರೀಲಿ ಅಂತ ತೋರಿಸುವುದಕ್ಕಾದರೂ ನಿನ್ನನ್ನ ರಿಟೈರ್ ಮಾಡಿಸದೆ ನೌಕರಿಯಲ್ಲೇ ಇರಿಸಿರಬೇಕಾಗಿತ್ತು" ಅಂತ ಕೂಗಿದೆ.

ಶಂಖವಾದ್ಯದ ಪರಿಚಯವಿಲ್ಲದಿದ್ದರೂ. ಮಹಾಬಲರಾಯರು, "ಹಾಗಾದರೆ ನಮ್ಮ ನಾಗರಾಜ ಕೆಲಸಕ್ಕೆ ಸೇರುವ ಪೇಪರಿನವನಿಗೆ ತೂಕದ ತಲೆ ಇದೆ" ಎಂದು ಒಳಗೆ ಹಿಗ್ಗಿದರು....ರಾಯರ ಸಂಗಡ ಕಾಫಿ ತಿಂಡಿ ಪೂರೈಸಿ, ಶೀನಪ್ಪ ತನ್ನ ನಿತ್ಯದ ಕಾರ್ಯಕ್ರಮಗಳಿಗಾಗಿ ಹೊರಟ.

# ಅಡಿಗೆ ಮನೆ

ರಾಯರು ಊಹಿಸಿದಂತೆಯೇ, ಸರಸುವಿಗೆ ಕೋಪ ಉಕ್ಕಿಬಂತು. ತನ್ನ ಮಗನ ಕ್ಷೇಮಸಮಾಚಾರವನ್ನು ಟಪಾಲು ಮೂಲಕ ತಿಳಿಯಬೇಕಾಗಿ ಬರುವಷ್ಟು ತಿರಸ್ಕಾರಕ್ಕೆ ತಾನು ಅರ್ಹಳೆ, ಎಂದು ಅವಳು ಒಲೆಯ ಮುಂದೆ ಕುಳಿತು ಕೊರಗತೊಡಗಿದಳು.... ಆಫೀಸ್ ಅಟೆಂಡರೇ ಅಡಿಗೆಯವನು, ಆಫೀಸ್ ಜವಾನರೇ ಆಳುಗಳು, ಆಫೀಸ್ ಕ್ಲಾರ್ಕೇ ಡ್ರೈವರು, ಎಂಬೀ ಉಚಿತ ಸುಖದಲ್ಲೋಲಾಡಿದ ಸರಸುವಿಗೆ ರಾಯರು ರಿಟೈರಾದದ್ದು ಸುಡುನೀರಲ್ಲಿ ಕೈಬಿಟ್ಟ ಹಾಗಾಗಿತ್ತು! ಅವರ ಐವತ್ತನೆಯ ವರ್ಷದ ವರ್ಧಂತಿಯಾದಮೇಲೆ, ಸರಸುವಿಗೆ ನಿತ್ಯವೂ ಪಡುವಲ ದಿಗಂತದಲ್ಲಿ ತನ್ನ ಪತಿ ಭಾಸ್ಕರನು ಮುಳುಗಲಿರುವ ದಿನಗಳೇ ಗೋಚರಿಸಿದುವು. ಅಂದಿನಿಂದ ದಿನದಿನಕ್ಕೂ ತಮ್ಮ ಪ್ರತಿಷ್ಠೆ ಇಳಿಮುಖವಾಗುತ್ತಿರುವುದನ್ನು ನೋಡನೋಡುತ್ತಲೇ ಅವಳು ಸಂಸಾರ ನಿರ್ವಹಿಸಬೇಕಾಗಿತ್ತು. ಆಳುಗಳೂ ಕೂಡ, "ಇನ್ನೆರಡು ವರ್ಷ, ತಾಯಿ, ನಮಗೆ ತಮ್ಮ ಸೇವೆಯ ಋಣ" ಎಂದು ಗೊಣಗುತ್ತ, ಕೆಲಸಗಳಲ್ಲಿ ಅಸಡ್ಡೆ ತೋರಿಸುತ್ತಿದ್ದರು. ಕಲ್ಲಾಗಿರಬೇಕು, ಕಠಿನ ಕಾನೂನೊಳಗೆ— ಎಂದು ಅವಳೂ ಮನಸ್ಸನ್ನು ಒಂದು ರೀತಿಯಾಗಿ ಗಟ್ಟಿಮಾಡಿಕೊಂಡಿದ್ದಳು. ಕಡೆಗೂ, ಸಾಹೇಬರು ಸಾಧುರಾಯರಾದರು; ಅಮ್ಮಾವರೂ ಸರಸಮ್ಮನಾದರು. ಸೇವಕರೆಲ್ಲ ಕಳ್ಳ ಕಣ್ಣೀರನ್ನು ಸುರಿಸಿ, ಬಾಗಿಲು ದಾಟಿ ಹೊಸ ಸಾಹೇಬರ ಹೊಸಲಿಗೆ ತೋರಣ ಕಟ್ಟಿದರು; ಆತನ ಅಮ್ಮನವರಿಗಾಗಿ ಅಂಗಡಿ ಸುತ್ತಿದರು. ಅವರಿಗೆ ಬದಲಾಗಿ, ಹೊಸಬರನ್ನು ಸಂಬಳ ಕೊಟ್ಟು ಕೆಲಸಕ್ಕಿಟ್ಟುಕೊಳ್ಳೋಣವೆಂದರೆ, ತಿಂಗಳಿಗಿಪ್ಪತ್ತು ಮೂವತ್ತು ಕೈಯಿಂದ ತೆರಬೇಕಂತೆ! ಅಡಿಗೆಯವನಿಗೆ ಕಂಠಪೂರ್ತಿ ರಾತೀಪು ಬೇರೆ! ಅಲ್ಲದೆ, ಅವನ ದುಂದು! ದಾಂಧಲೆ! ಒಲೆ ಹೊತ್ತಿಸುವುದಕ್ಕೆ ತುಪ್ಪ, ದಾಹ ಪರಿಹಾರಕ್ಕೆ ಹಾಲು ಬಾಯಿ ಚಪ್ಪರಿಸುವುದಕ್ಕೆ ಗೋಡಂಬಿ, ಸಕ್ಕರೆ!.... ಅವನಿಗೆ ಕೈಯೆಲ್ಲ ಕದಿತ ಮೈಯೆಲ್ಲ ಹೊಟ್ಟೆ, ಹೊಟ್ಟೆ ಪೂರ ಹಸಿವು, ತಲೆ ಎಲ್ಲ ಜಂಬ, ಗಂಟಲುದ್ದಕ್ಕೂ ನೀರಡಿಕೆ, ಕಣ್ಣತುಂಬ ತೂಕಡಿಕೆ! ರಾಯರ ಮನೆಯಲ್ಲಿ ಅಡಿಗೆ ಕೆಲಸವೋ,

ಬಹು ಸುಲಭ! ಅರಕ್ಕೋ ಮೂರಕ್ಕೋ ಶೀನಪ್ಪನೊಬ್ಬನೇ ಅವೇಳೆಯ ಅಭ್ಯಾಗತ! "ಇನ್ನುಮೇಲೆ, ಇಲ್ಲಿ ಅಡಿಗೆಗೆ ಆಳುಗಳು ಬೇಕಾಗಿಲ್ಲ! ರೊಟ್ಟಿ ರಾದರೆ, ಗುರುವಾರ ಶನಿವಾರಗಳಲ್ಲಾದರೂ ಒಪ್ಪತ್ತು ಊಟ ಸಾಲದೆ? ನನಗಂತೂ, ಏಕಾದಶಿ ಉಪವಾಸ ಇದ್ದೇ ಇರಬೇಕು" ಎಂದು ಗುಣಾಕಾರ ಹಾಕುತ್ತಾ, ಸರಸು ಪಾಪ ತನ್ನನ್ನೇ ಒಲೆಗೊಂದು ಒದೆಗೊರಡಾಗಿ ಮಾಡಿ ಕೊಂಡಿದ್ದಳು. ಚಂಚು ಅಲ್ಲಿ ಸುಳಿಯಕೂಡದೆಂದು ಮನುಧರ್ಮಶಾಸ್ತ್ರದಲ್ಲೇ ಇತ್ತು.

ಚಂಚುವಿಗೆ ತಿಥಿ ನಕ್ಷತ್ರ ಯಾವುದೂ ಇಲ್ಲದಿರುವುದು ಸರಸುವಿಗೆ ಮೊದಲಿಂದಲೂ ದೊಡ್ಡ ತಲೆನೋವು. ಅವಳು ಸಕೇಶಿಯಾಗಿಯೇ ಉಳಿದಿರುವುದು, ಅವಳು ಕೊಳೇಬರ ಕುಯ್ಯುವ ಪರೀಕ್ಷೆಗೆ ಓದಿದ್ದು, ನಾನಾ ಜಾತಿ ಜನರ ಕೈಹಿಡಿದು ನಾಲಗೆ ನೋಡಿ ಬೆನ್ನು ಬಡಿದು ಹೊಟ್ಟೆ ಮುಟ್ಟಿ ಹಲ್ಲು ಕಿತ್ತು, ಮಲಮೂತ್ರ ಪರೀಕ್ಷಿಸಿ, ಒಂದು ಉದ್ಧರಣೆ ಗಂಜಳ ಕೂಡ ಕುಡಿಯದೆ ಆಹಾರ ತೆಗೆದುಕೊಳ್ಳುವುದು—ಇವೊಂದೂ ಸರಸುವಿಗೆ ಸರಿಬೀಳಲಿಲ್ಲ. ಅವಳ ಗಂಡ ಗಂಗಮ್ಮನ ಪಾಲಾದಾಗ, ಮನೆಗೆ ಸೇರಿಸಿದ್ದಾಯಿತು. "ಮುಂದಕ್ಕೆ ಅವಳಿಗೆ ಈ ವೈದ್ಯದ ವ್ಯಾಧಿ ಹಿಡಿಯುತ್ತದೆಂದು ಆಗ ಯಾರು ಕನಸು ಕಂಡರು? ಅದಕ್ಕೂ, ಬೇರಿಗೆ ನೀರು ಕಾಣಿಸಿದವರು ಶೀನಪ್ಪನವರು, ರಾಯರು! ಹೆಂಗಸರ ಚಿಕಿತ್ಸೆಗೆ ಹೆಂಗಸರೇ ಬೇಕು, ಸರಿ! ವಜ್ರಂ ವಜ್ರೇನ ಭಿದ್ಯತೇ ಅಂತ ನನಗೂ ಆಗ ಅದು ಒಪ್ಪಿತು, ಅನ್ನಿ! ಆದರೆ, ಅದಕ್ಕೆ ಚಂಚುವೇ ಬೇಕಾಗಿತ್ತೆ? ಬೇಕಾದಷ್ಟು ಕ್ರಿಶ್ಚಿಯನರಿಲ್ಲವೆ? ಸಾಲದೆ? ಸೀತೆ ಸಾವಿತ್ರಿಯರು ತಾರಾ ಮಂಡೋದರಿಯರು ಧನ್ವಂತರಿಯ ಕಲಶಕ್ಕೆ ಆಸೆಪಟ್ಟರೇನು? ಆಗ ಅವರ ಬಾಣಂತನಕ್ಕೆ ಯಾವ ಎಲ್.ಎಂ.ಪಿ. ಇದ್ದಳು. ಅವುಳಿಜವುಳೀನ್ನೂ ಕೂಡ ವಾಲ್ಮೀಕಿ ಆಶ್ರಮದಲ್ಲೇ ನಿಭಾಯಿಸಲಿಲ್ಲವೇ?" ಎಂದು ಸರಸು ಒಲೆಯನ್ನು ಕೇಳಿದಳು, "ಹುಟ್ಟುತ್ತ ಅಕ್ಕತಂಗಿಯರು, ಬೆಳೆಯುತ್ತ ಬೆಳೆಯುತ್ತ ಒಬ್ಬಳು, ರಂಗಿ. ಒಬ್ಬಳು ಶಿಂಗಿ! ಹಾಗಾಯಿತು, ಇಲ್ಲಿಯ ಸಂಸಾರ. ಇಲ್ಲಿಗೆ ಇವಳೇ ರಾಣಿಯಾಗಿ ಬಿಟ್ಟಳಲ್ಲಾ!....ಹಾ? ಒಂದೇ ಒಂದು ಸೊಸೆ, ನನಗೆ. ಅದನ್ನು ಬೈಯೋಣ ಅಂತ ನಾನು ನಾಲಗೆ ಹಿರಿದರೆ, ಅವಳಿಗಡ್ಡವಾಗಿ ಇವಳು ಗುರಾಣಿ! ಇವ ಏಗೋ, ಕುಂಟಗಿರುವುದೆಲ್ಲ ನಂಟು! ನನ್ನ ಮಾತು ಅಂದರೆ, ಗುಮಾನಿ!

ನನ್ನ ದೂರು ಒಂದು ಚೂರೂ ಕಿವಿಗೆ ಹಾಕಿಕೊಳ್ಳುವುದಿಲ್ಲ! ಅಲ್ಲಾ, ಹೂವು ಯಾರು, ನಾರು ಯಾರು, ಎಂಬ ವಿವೇಚನೆ ಬೇಡವೆ? ಇವಳು ಹಾ ಅಂದರೆ ಇವರೂ ಹೂ ಅನ್ನೋದು; ಇವಳು ಹೂ ಅಂದರೆ, ಇವರು ಹೋ ಅನ್ನೋದು. ಎಲ್ಲಾ ಇಂಗ್ಲೀಷಲ್ಲೇ ಇವರಿವರ ಮಾತು!" ಎಂದು ಚಂಚು ಮೇಲೆ ಕೋಪ ಕಾರಿದಳು. "ಇವಳಿಗೆ ಇಂಗ್ಲಿಷ್ ವೈದ್ಯ ಕನ್ನಡ ವೈದ್ಯ ಎರಡೂ ಗೊತ್ತಿರೋದು ಬೇರೆ ಒಂದು ಹೆಮ್ಮೆ. ಭಾವನ ವ್ಯೆಗೆ ಮೆಣಸು ಕೊಡು ಗೆಣಸು ಬಿಡು, ಹಾಗಲ ಹಾಗ, ಪಡವಲ ಮುಪ್ಪಾಗ, ಹಲಸು ಹೊಲಸು ಕಜ್ಜಿಗೆ ಮಜ್ಜಿಗೆ ಅಂತ ಇವಳೇ ಹೇಳಬೇಕೇನು, ನನಗೆ? ಅವರೋ ರುಜುಹಾಕಿ ಸಂಬಳ ತರೋದೊಂದು ಕಲಿತಿದಾರೆಯೇ ಹೊರತು, ಇತರೇ ವಿಷಯಗಳಲ್ಲಿ ನೆತ್ತಿ ಮುಚ್ಚದ ಕೂಸು! ಜ್ವರ ಅಂದರೆ ನಡುಗುತ್ತಾರೆ, ಶೀತ ಅಂದರೆ ಭೀತಿ. ವೈದ್ಯ ಹೇಳುವುದೇ ವೇದ. ಸಾಹೇಬರು ಅಂತ ಊರೂರೇ ಕೈಮುಗಿಯುತ್ತಿರೋ ಮಹಾನುಭಾವರ ಆರೈಕೆಯನ್ನ ನಾನೇ ಮಾಡಬೇಕು ಅಂತ ನನ್ನ ಜೀವ ಮಿಡಿಯುತ್ತಾ ಇದೆ. ಇವಳು ಬಿಟ್ಟರೆ ತಾನೆ? ಯಾಕೊ, ಮಹಾ!.... ಇನ್ನು ಮೇಲೆ, ನಾನೂ ಬಿಟ್ಟುಬಿಡುತ್ತೇನೆ. ನನ್ನ ಜವಬ್ದಾರೀನೂ ಮೊನ್ನೆಗೆ ಮುಗಿಯಿತು. ನಾನಿನ್ನು ಪೇಚಾಡುವುದಿಲ್ಲ. ಧೋಬಿ ರುಮಾಲು ತಂದನೆ, ಬೂಟ್ಸಿಗೆ ಬಣ್ಣ ಬಳಿದನೆ, ಗುಂಡಿ ಹೋಳು ಬಿದ್ದಿದೆಯೆ, ಕಿಸೆಯೊಳಗೆ ಕಚೇರಿ ಬೀಗದಕೈ ಇದೆಯೆ, ಗಡಿಯಾರಕ್ಕೆ ಕೀಲು ತಿರುಗಿಸಾಯಿತೆ, ಎಂಬ ಯೋಚನೆ ಎಲ್ಲ ಇನ್ನು ಏಕೆ? ಇನ್ನು ಎಷ್ಟು ಹೊತ್ತಾದರೂ ನಿದ್ದೆಮಾಡಲಿ, ಲೇಟಾಗುತ್ತೆ ಅಂತಿಲ್ಲ. ಏನು ಬೇಕಾದರೂ ಕಲಸಿಕೊಳ್ಳಲಿ, ಲೇವೇರುತ್ತೆ, ಅಂತಿಲ್ಲ. ನನ್ನ ಅಂಕೆ ಅಂಕುಶದಿಂದ, ಕರೀಬೊಟ್ಟಿಲ್ಲದೆ, ಮಾನವಾಗಿ ಮನೆಗೆ ಬಂದದ್ದಾಯಿತು....ಇನ್ನು ಇವರ ಪಾಡಿಗೆ ಇವರು ಪೂಜೆ ಪಾರಾಯಣ, ಹಬ್ಬ ಹರಿದಿನ, ಜಾತ್ರೆ ಜಯಂತಿ, ಅಂತ ಜನ್ಮ ಸಾರ್ಥಕಮಾಡಿಕೊಳ್ಳಲಿ....ಇವರ ಆರೋಗ್ಯ ಆರೋಗಣೆ ಎಲ್ಲಕ್ಕೂ ಡಾಕ್ಟರ್ ಚಂಚು? ಡಾಕ್ಟರ್ ಚಂಚು? ಅಂತ ಅವಳನ್ನೇ ವಿಚಾರಿಸಲಿ' ಎಂದು ಸರಸು ಕಣ್ಣೀರಿಡುತ್ತ ಕನವರಿಸಿಕೊಂಡಳು.

"ಅಯ್ಯೋ! ಇವರನ್ನೇ ನೆಚ್ಚಿಕೊಂಡು, ನಾನು, ಹೆತ್ತ ಮಗನನ್ನೇ ದೂರ ಮಾಡಿಕೊಂಡೆ. ಎಳೆತನದಲ್ಲಿ, ಅವನನ್ನ ಮುದ್ದಾಡಿಸಿ ಆಡಿಸಿ ಮೊದ್ದುಮಾಡಿ

ಕೂರಿಸಿದರು. ಮುಖ್ಯ, ನನ್ನದೇ ತಪ್ಪು. ಅವನನ್ನ ಈ ಜವಾನರ ರಟ್ಟೆಗಳ ಮೇಲೆಯೇ ಬೆಳೆಸಿದೆ. ನನ್ನ ಬುದ್ಧಿಗೆ ಇನ್ನೇನು ತಾನೆ ತೋಚೀತು? ನಮ್ಮ ಅಪ್ಪನ ಮನೇಲಿ ಕೂಡ ಮೂಲೆಗೆ ಮೂರು ಜನ, "ಆಳುಳ್ಳೋನು ಬೋಳ, ಕೂಳುಳ್ಳೋನು ತೋಳ" ಎಂಬಹಾಗೆ! ಅದರಿಂದಲೇ ಬಂತು, ಗ್ರಹಚಾರ, ನಾಗರಾಜನಿಗೆ! ಜವಾನ ಸಾಕಿದ ಮಗು, ದಿವಾನ ಆಗ್ತಾನೆಯೇ? ಬೀಡಿ ಸೇದು ವುದು, ಬೀದಿ ತಿರುಗೋದು, ಬಯಲಾಟ ಆಡೋದು, ಭಂಡಾಟ ಮಾಡೋದು, ಕಾಸು ಕದಿಯೋದು, ಕಡಲೆ ತಿಂಬೋದು—ಇವೇ ಅವನ ಬಾಲಲೀಲೆ. ಎಷ್ಟೋ ಸಲ ಎಡವಿಬಿದ್ದರೂ, ಕಾಲೇಜು ಬಾಗಿಲನ್ನೂ ಕಂಡ ಕಡೆಗೂ!.... ಕೂತು ತಿಂದರೂ ಕರಗದಷ್ಟು ಕೂಡಿಹಾಕಿಟ್ಟಿದ್ದರೂ ಕೂಡ, ಅವನಿಗೆ ಹಾಗೆ ತಿನ್ನಿಸ ಬಾರದು, ಅಂತ ಚಂಚೂದೇ ಬೋಧನೆ! ಅವನು ಸೈಕಲ್ ತುಳಿದು ಸಮಾ ಚಾರ ಶೇಖರಿಸಿ ಪೇಪರು ತುಂಬಿಸಿ ಹಣ ತರದೆ ಹೋದರೆ, ಯಾರಿಗೇನು ನಷ್ಟ ವಾಯಿತೋ ಕಾಣೆ" ಎಂದು ಸರಸುವಿನ ತಾಯ್ತನ ರಾಯರಿಂದ ಮೆಲ್ಲಗೆ ಮಗನ ಕಡೆಗೆ ಹರಿಯತೊಡಗಿತು. ರಾಯರ ಯೋಗಕ್ಷೇಮ ನೋಡಿಕೊಳ್ಳು ವುದಕ್ಕೆ ತನಗಿಂತ ವಿಚಕ್ಷಣಳಾದ ದಾದಿ ಚಂಚುವೇನೆ ಎಂದು ಅವಳ ಅಂತರಂಗ ಪಿಸುಗುಟ್ಟಿತೋ, ಏನೊ? ತನ್ನ ಲಾಲನೆಗೊಂದು ಪಶುವೋ ಶಿಶುವೋ ಸಿಕ್ಕ ದಿದ್ದರೆ, ಸರಸುವಿಗೆ ಉಸಿರಾಡದು; ಅದು ಅವಳ ಸ್ವಭಾವ!...."ಹೆಂಡತಿ ಮಾತು ಕೇಳಿಕೊಂಡು, ಅವನು ಬೊಂಬಾಯಿಗೆ ಹೋಗಿ....ಅಲ್ಲಿ....ಛೆ! ಇವ ರಾದರೂ ಒಂದು ಮಾತು ಹೇಳಬೇಡವೆ? ಇರೋ, ನೋಡೋಣ! ಹೆಂಗಸರ ಹೃದಯ ಇವತ್ತಿದ್ದಹಾಗೆ ನಾಳೆ ಇರೋದಿಲ್ಲ. ನಾನು ಅವಳಿಗಿಂತ ಎಂಟು ವರ್ಷ ಮೊದಲೇ ಹುಟ್ಟಿದವನು. ಅವಳಿಗಿಂತ ಲೋಕಾನ ಹೆಚ್ಚಾಗಿ ಸುತ್ತಿರು ವವನು, ತಾಳೊ! ಕೋಪದಲ್ಲಿ ಅವಳೇ ಒಂದು ಮಾತು ಹೆಚ್ಚು ಆಡಿರ ಬಹುದು; ಅಥವಾ, ರೋಷದಲ್ಲಿ ನಿನ್ನ ಹೆಂಡತೀನೆ ಒಂದು ಮಾತು, ಕಡ ವೇದು, ಆಡಿರಬಹುದು, ಅಂತ ಗಂಡಸರಾದವರು ನ್ಯಾಯ ನೀತಿ ಹೇಳೋದಿಲ್ಲವೆ? ....ಇವರ ಅಪ್ತಮಂತ್ರಿ ಚಂಚು ಕೂಡ ಅಂದಳು: ಭಾವ! ಇಲ್ಲೇ ಬೇರೆ ಮನೆ ಮಾಡಿಕೊಂಡಿರಲಿ, ಅತ್ತೆಗೆ ಹೆದರಿಕೊಂಡು, ಪತ್ತೆ ಇಲ್ಲದೆ ಪರಾರಿ ಆದಳು, ಎಂಬ ಕೆಟ್ಟ ಹೆಸರು ಏಕೆ ಸೊಸೆಗೆ, ಅಂತ?....ಥೂ! ಆ ಹುಡುಗೀನೂ ಚೆಲ್ಲು ಚೆಲ್ಲು. ಮಡಿ ಆಚಾರ ಕಡಮೆ; ಮಾತು ಕಥೆ ಜೋರು. ನಾಗರಾಜನನ್ನ ಕಂಡರೇನೋ

ಮುಖ ಮಲ್ಲಿಗೆ ಚೆಲ್ಲಿಬಿಡುತ್ತದೆ! ಜಾಣೆ. ರಂಗೋಲಿ ಎಷ್ಟು ವಿಧ ಹಾಕ್ತಿದ್ದಳು! ಕಸೂತೀನೂ ಅಷ್ಟೆ....ಏನೋ, ಹಿಂದೇನೆ ಕುಲಾವಿ ಹೊಲೆದಳಲ್ಲಾ ಅಂತ ಈಗ ಅದನ್ನ ತೊಡಿಸು ಅಂತ ದೇವರು ಹೊಟ್ಟೆಯಲ್ಲಿ ಒಂದು ಮಗು ಕಾಣಿಸಿದಾನೆ. ನಾಲ್ಕು ತಿಂಗಳಾಗುತ್ತಲೂ ಇಲ್ಲಿಗೇ ಕರೆತರಬೇಕು....ಕಂಡವರು ಕೇಳಿದವರು ಮೂದಲಿಸುತ್ತಾರೆ, ಮೂದಲಿಸಲಿ. ಏನು ಸರಸಮ್ಮ, ಸೊಸೆ ನಿಮ್ಮದಲ್ಲ, ಮೊಮ್ಮಗ ನಿಮ್ಮದಾಯಿತೆ ಅಂತ! ಆದರೂ ಇನ್ನು ನನಗೆ, ಮಗ ಸೊಸೆ ಮೊಮ್ಮಗು ಅಲ್ಲದೆ, ಇನ್ನೇನಿದೆ? ಚಂಚೂನೂ ಚುಚ್ಚುತ್ತಾಳೆ. ಅವಳ ಇಂಗ್ಲೀಷ್ ಕೇಳಿಕೊಂಡು ಇವರೂನೂ ನನ್ನನ್ನ ಹೀಯಾಳಿಸುತ್ತಾರೆ!.... ಹೌದು! ಚಂಚು ಇರೋದಿಲ್ಲವಲ್ಲಾ ಇನ್ನು ಈ ಮನೇಲಿ? ಇನ್ನೇನು ಅವಳು ಆಸ್ಪತ್ರೆ ಬಂಗಲೆಗೆ ಹೊರಟುಬಿಡ್ತಾಳಂತಲ್ಲಾ. ನನ್ನ ಗಂಡ, ನನ್ನ ಮಗ, ಎಲ್ಲ ನನಗೇ ಸಿಕ್ತಾರೆ" ಎಂದು ಮುಂತಾಗಿ ಮನೋರಾಜ್ಯದಲ್ಲಿ ಸಂಚಾರ ಮಾಡುತ್ತ ಸರಸಮ್ಮ ಎಣಿಕೆ ಹಾಕಿದಳು.

"ಅಕ್ಕಾ ಏಳು! ಮಗ, ಮೊಮ್ಮಗ, ಅಂತ ಮಂಡಿಗೆ ತಿನ್ನುತ್ತ ನೀನಿವತ್ತು ಭಾವನ ಊಟಕ್ಕೆ ತಟ್ಟೆ ಇಡುತ್ತೀಯೋ ಇಲ್ಲವೋ?" ಎಂದು ಕೇಳುತ್ತ ಚಂಚು ಅಡಿಗೆಮನೆ ಬಾಗಿಲಲ್ಲಿ ಕಾಣಿಸಿಕೊಂಡಾಗ, ಸರಸು ಎದ್ದಳು. ಆದರೆ, ತಾನು ಸುದ್ದಿ ತಿಳಿಸಿದಾಗ ಕೂತಿದ್ದ ಸರಸುವಿಗೂ, ತಾನು ಸದ್ದುಮಾಡಿದಾಗ ಎದ್ದ ಸರಸುವಿಗೂ ಇದ್ದ ವ್ಯತ್ಯಾಸ ಚಂಚುವಿಗೆ ತಿಳಿಯದು....

# ರೈಲು ಗಾಡಿ

ಮೇಲಿನ ಹಲಗೆ ಸಾಲಿನಲ್ಲಿ ಮಲಗಿಕೊಂಡು, ನಾಗರಾಜ ಬೊಂಬಾಯನ್ನು ಕ್ಷಣ ಕ್ಷಣಕ್ಕೂ ಅಗಲುತ್ತಿದ್ದ. ಮೂರನೆಯ ತರಗತಿ ಡಬ್ಬಿ ಒಂದರಲ್ಲೂ, ದಂಪತಿಗಳಿಗೆ ಕೂರುವುದಕ್ಕೆ ಹಾಗಿರಲಿ, ತೂರುವುದಕ್ಕೂ, ಸ್ಥಳ ಸಿಗಲಿಲ್ಲ. ಆದ್ದರಿಂದ, ನೀರಜಳನ್ನು ಮನಸ್ಸಿಲ್ಲದ ಮನಸ್ಸಿನಿಂದ, ಅವನು 'ಹೆಂಗಸರಿಗಾಗಿ" ಎಂಬ ಗಾಡಿಯಲ್ಲೇ ಕುಳ್ಳಿರಿಸಬೇಕಾಯಿತು. ತನ್ನ 'ಸಂಸಾರ ಸುಖ ಸಾಕಾರಿ' ಯೊಂದಿಗೆ ಕಂಬಿ ದಾರಿ ಉದ್ದಕ್ಕೂ ಲಲ್ಲೆ ಹೊಡೆಯುತ್ತ ಚಹ ಕುಡಿಯುತ್ತ ಸಿಗರೇಟ್ ಹೊಗೆಯಿಂದ ಅವಳನ್ನು ಆಗಾಗ ವಿಸ್ಮಯಿಸುತ್ತ ಪ್ರಯಾಣದ ಆಯಾಸವನ್ನು ತೃಣೀಕರಿಸಬಹುದೆಂದು ನಾಗರಾಜ ಹಿಂದಿನ ರಾತ್ರಿ ಕನಸು ಕಂಡಿದ್ದ. ಆ ಕನಸು ಕನ್ನಡಿ ಗಂಟಾಯಿತು.... ಪೋರ್ಟರೊಬ್ಬನಿಗೆ ಒಂದು ರೂಪಾಯಿ ದಕ್ಷಿಣೆ ತೆತ್ತು, ನಾಗರಾಜ ತನಗೊಂದು ಮೇಲೆ ಹೇಳಿದ ತ್ರಿಶಂಕು ಪೀಠವನ್ನು ಸಂಪಾದಿಸಿ, ಅಲ್ಲಿ ಕೈಕಾಲು ನೀಡಿ ಮಲಗಿದ. ಜನಸಂದಣಿಯ ಉಸಿರಾಟ ಕೆಸರಾಟದಿಂದ ಗಾಡಿಯೊಳಗಣ ಗಾಳಿ, ಗಪ್ ವಾಸನೆ ತುಂಬಿ, ಬಿಸಿಯಾಯಿತು....ನೀರಜಳನ್ನು ಕಂಡು, ಅವಳಿಗೂ ತನ್ನನ್ನು ಕಾಣಿಸಿ, ಅವಳಿಗೆ ಆಹಾರ ಪಾನೀಯಗಳನ್ನೊದಗಿಸಲು, ನಾಗರಾಜನಿಗೆ ಸ್ಟೇಷನ್ ಸ್ಟೇಷನ್‌ನಲ್ಲೂ ಆಸೆ ಮೂಡುವುದು. ಅರವತ್ತೆಪ್ಪತ್ತೈದು ಮೈಲಿಗಳನ್ನು ದಾಟಿದ ಕೂಡಲೇ, ಅವನಿಗೆ ಸತಿಯ ನೆನಪು ಸಹಿಸಲಾರದಷ್ಟಾಗುವುದು. ಆಗ ಮುಂದಿನ ಸ್ಟೇಷನ್ನಿನ ಕೈಮರದ ಹಸುರು ಕೊಂಬೆ ಸೊಟ್ಟಾಗಿ ಕೆಳಗಿಳಿವ ಮೊದಲೇ, ನಾಗರಾಜ ಎದ್ದು ಬೆನ್ನು ಬಗ್ಗಿಸಿ ತಲೆ ತಗ್ಗಿಸಿ ಕಾಲುಗಳಿಂದ ಚಪ್ಪಲಿಗಳನ್ನು ಹೊರಗೆಳೆದು ಕೈಯಲ್ಲಿ ಹಿಡಿದು ಸ್ಥಳ ಸಂರಕ್ಷಣೆಗಾಗಿ ಅವುಗಳನ್ನು ಮೇಲುಹಲಗೆಯಲ್ಲಿ ಹರಡಿದ್ದ ಹಾಸಿಗೆಯ ಮೇಲಿರಿಸಿ, ಕೆಳಗೆ ಕೂತು ಆಕಳಿಸುವವರ ತಲೆಗಳ ನಡುವೆ ಕಾಲುಗಳನ್ನಿಳಿಯಬಿಟ್ಟು, ಉಸಿರು ಕಟ್ಟಿ, ಸರ್ಕಸ್ ಮಾಡುತ್ತ ಸರಪಣಿ ಹಿಡಿದು, ಅವರ ಶಾಪಗಳ ಮಧ್ಯೆ ಕೆಳಕ್ಕೆ ಧುಮುಕುವನು. ಮುಂದಕ್ಕೆ, ಬಾಗಿಲ ತನಕ ಹೋಗುವುದೇ ಬಹು ಪ್ರಯಾಸದ ಕೆಲಸ. ಹೆಜ್ಜೆಗೆ ಅಡ್ಡವಾಗಿ ಬಿದ್ದಿದ್ದ

ಮೊಣಕಾಲು ಹೋಲ್ಡಾಲು ಮಕ್ಕಳು ಚಕ್ಕಳದ ಪೆಟ್ಟಿಗೆ ಇವುಗಳನ್ನೆಲ್ಲ ತಟಾಯಿಸಿ, ಬಾಗಿಲ ಹತ್ತಿರದ ಗುಂಪಿನ ಅಂಚನ್ನು ಸೇರಬೇಕು- ಗಾಡಿ ನಿಲ್ಲುತ್ತಲೂ, ಬಾಗಿಲು ತೆರೆದು ಹೊರಕ್ಕಿಳಿಯೋಣವೆಂದರೆ, ಒಳಗಿರುವವರ ಹಾಹಾಕಾರ: “ ತಾಳಿ, ಸ್ವಾಮಿ ! ಈ ಊರಿಂದ ನುಗ್ಗಿ ಬರೋ ಕ್ರೂರಿಮಂದಿ ಎಲ್ಲ ಬೇರೆ ದೊಡ್ಡಿಗಳಿಗೆ ಪ್ರವೇಶಿಸಿಬಿಡಲಿ. ಆಮೇಲೆ ನೀವು ನಿಧಾನವಾಗಿ ಇಳಿಯಿರಿ ” ಎಂದು. ಅವರ ಮಾತಿನಂತೆ ತಡಮಾಡಿದರೆ, ನೀರಜಳ ಕಿಟಕಿಯ ಹತ್ತಿರ ಹೆಚ್ಚು ಹೊತ್ತು ನಿಂತು ಲಲ್ಲೆ ಹೊಡೆಯಲು ಅವಕಾಶ ಸಿಗುವುದಿಲ್ಲ. ದಂಪತಿಗಳ ಮೇಲಿನ ಹೊಟ್ಟೆ ಉರಿಯಿಂದಲೋ ಏನೋ ಕಂಪನಿಯವರು ಅರೆ ನಿಮಿಷದಲ್ಲೇ ಬೆಲ್ಲು ಬಾರಿಸಿ ಬಾವುಟ ಬೀಸಿ ಬ್ರೇಕ್ ಬಿಚ್ಚಿ ಬೆಂಕಿ ಬೆಳಸಿ ಚಕ್ರ ತಿರುಗಿಸಿಬಿಡುತ್ತಾರೆ. ಗಾಡಿ ಧಾವಿಸುತ್ತಿರುವಾಗಲೇ ತನ್ನ ಡಬ್ಬಿಯೊಳಕ್ಕೆ ನೆಗೆಯಬೇಕಾಗುತ್ತದೆ. ಮತ್ತೆ ಮಂಗಾಟಮಾಡಿ ಮೇಲಕ್ಕೇರಿ ಚಪ್ಪಲಿ ಧರಿಸಿ ಸಿಗರೇಟ್ ಹಚ್ಚಿ, “ ಈಗ ಬಹುಶಃ ನೀರಜ ಏನು ಯೋಚಿಸುತ್ತಿರುತ್ತಾಳೆ ” ಎಂದು ಯೋಚಿಸುತ್ತ ನಾಗರಾಜನೂ ಅಡ್ಡಾಗುವನು.

ಬೊಂಬಾಯಿ ಬದುಕು ಅವರಿಬ್ಬರಿಗೂ ಒಂದು ಕೆಟ್ಟ ಕನಸು! ನಾಗರಾಜನಿಗಂತೂ ಅದು ತೀರ ನಾಚಿಕೆ ಕೆಟ್ಟ ಜೀವನ. ಆದ್ದರಿಂದ, ಅದನ್ನು ಕುರಿತು ಒಬ್ಬರಿಗೊಬ್ಬರು ಮಾತನಾಡಲೇ ಕೂಡದೆಂದು ಅಲ್ಲಿಂದ ಹೊರಡುವಾಗಲೇ ಅವರು ಒಪ್ಪಂದಮಾಡಿಕೊಂಡಿದ್ದರು. ಆ ಊರಿನ ಉನ್ಮಾದ, ಹಸಿವು, ಅವಸರ, ಅತಿಯಾಸೆ, ಗಡಿಬಿಡಿ, ಧೂಳು ಮತ್ತು ಅಪಾಯ ಇವುಗಳನ್ನೆಲ್ಲ ನೆನೆದು, ನಾಗರಾಜ “ ಸೆಖೆಯೊಳಗಿರ್ದುಂ ನಡುಗಿದನ್.” ಮುಂದೆ ಪೆಂಗಡೂರಲ್ಲೂ ತಮ್ಮ ಕಿರುದೋಣಿ, ಬಡತನ, ಭುಂಡತನ, ಮುಂತಾದ ಸುಳಿಗಾಳಿಗಳಿಗೆ ಸಿಲುಕಿ ಮತ್ತೆ ಮುಗುಚುವುದೋ, ಏನೋ, ಎಂದು ಹೆದರಿದನು.

ಕೆಳಗಡೆ, ಅಸ್ತವ್ಯಸ್ತವಾಗಿ ಹೊರಳಾಡುತ್ತಿದ್ದ ಜನಸಮೂಹವನ್ನು ನೋಡಿ ಅವನಿಗೆ ಜೀವನದಮೇಲೆ ಜುಗುಪ್ಸೆ ಹೆಚ್ಚಿತು. ಅಲ್ಲಿ ಸುಮಾರು ನಲವತ್ತು ನಲವತ್ತೈದು ಜನ ಭಾರತೀಯರು, ಒಬ್ಬರಿಗೊಬ್ಬರು ನೇರವಾಗಿ ಪರಸ್ಪರ ಜಾಗ ಕೊಟ್ಟುಕೊಂಡು, ನೆಮ್ಮದಿಯಾಗಿ, ಇದ್ದಷ್ಟು ಸ್ಥಳವನ್ನು ಸಮವಾಗಿ ಅಳವಡಿಸಿಕೊಳ್ಳದೆ ನೂಕುನುಗ್ಗಲಲ್ಲಿ ಕಾದಾಡುತ್ತ ಕಷ್ಟಪಡುತ್ತಿದ್ದರು. ನಾಲ್ಕಾರು ಭಾಷೆಗಳನ್ನಾಡುತ್ತ ಸಂಭಾಷಣೆಯನ್ನು ಎಂಟು

ಮೂಲೆಗಳಿಗೂ ಎಸೆದಾಡುತ್ತಿದ್ದದ್ದರಿಂದ, ಮಾತಿನ ಗಲಾಟೆಯಿಂದ ಎಲ್ಲರಿಗೂ ತಲೆ ಸಿಡಿತ ಅಧಿಕವಾಯಿತು. ಕನಿಕರದ ಬಿಸುಸುಯ್ಲು, ಕಾಳಗಕ್ಕೆ ಕರೆಷ್ಕ ಕಹಳೆ, ಕುಶಲಪ್ರಶ್ನೆ, ಕೊರಗಿನ ಕುಗ್ಗಿದ ಕೊರಲು, ತರ್ಕ ವಿತರ್ಕಗಳ ತಾಂಡವ—ಎಲ್ಲವೂ ಆ ಗದ್ದಲದಲ್ಲಡಗಿದ್ದುವು. ಒಬ್ಬರು ಹೇಳಿದ್ದು ಹಲವರಿ ಗರ್ಥವಾಗದಿದ್ದರೂ, ಎಲ್ಲರಿಗೂ ಎಲ್ಲ ವಿಷಯಗಳಲ್ಲೂ ಆಸಕ್ತಿ ಹೆಚ್ಚು! ಎಲ್ಲಿಗೆ, ಎಲ್ಲಿಂದ, ಏಕೆ, ಎಷ್ಟು ಮಕ್ಕಳು, ಎಂಥ ಚಾಕರಿ,ಏನು ಸಂಬಳ—ಎಂದು ಎಲ್ಲರೂ ಮಿಕ್ಕ ಎಲ್ಲರನ್ನೂ ಕೇಳಿ ತಿಳಿದು ಟೀಕಿಸುತ್ತಿದ್ದರು. ಆ ಕೋಲಾ ಹಲದ ಮೇಲೆ (ಹೊಡೆದಾಟ ನಡೆಯುಲಿಲ್ಲವಾದ್ದರಿಂದ 'ಕೋಲಾ'ಹಲ ಎಂಬ ಮಾತು ಸಮಂಜಸವೋ ಏನೋ?)....ಆ ಕೋಲಾಹಲದ ಅಲೆಗಳ ಮೇಲೆ ಮಲಗಿ, ಶಾಂತವಾಗಿ, ತನ್ನ ಭವಿಷ್ಯವೂ ನೀರಜಳ ಭವಿಷ್ಯವೂ, ಯಾವ ರೀತಿ ರೂಪುಗೊಳ್ಳುತ್ತವೆ, ಎಂದು ನಾಗರಾಜ ಚಿಂತಿಸುತ್ತಿದ್ದ !

ನಾಗರಾಜ ಸೃಜಿಸಿದ 'ಜೋಗಿಜೀವನ' ಅನಾಮಧೇಯವಾಗಿ ತ್ತಾದ್ದರಿಂದ ವೆಂಗಡೂರಿನ ಕನ್ನಡ ಕಾರ್ಯಕಲಾಪಗಳಲ್ಲಿ, ತನ್ನ ಕಣ್ಣಿಗೆ ಕಪ್ಪು ಕನ್ನಡಕ ಬಿಗಿಯದೆಯೇ, ತಾನು ಮುಂದೆ ತಲೆ ಎತ್ತಿಕೊಂಡು ತಿರು ಗಾಡಬಹುದೆಂಬ ಅಂಶ ಅವನಿಗೆ ತುಂಬ ಧೈರ್ಯಕೊಟ್ಟಿತು. "ಉದರ ನಿಮಿತ್ತಂ ಬಹುಕೃತವೇಷಂ" ಎಂಬುದರಲ್ಲಿ ಅದೂ ಒಂದು, ಅಷ್ಟೆ! ಅದೂ ಕೂಡ ಮುಸುಕಿನಲ್ಲಿ ಮಾಡಿದ ವೇಷ! ಇನ್ನು ಶಂಖವಾದ್ಯದ ವಿಚಾರ. ಅದರ ದೇನು ಅಷ್ಟು ತಾಪತ್ರಯ ಹಚ್ಚಿಕೊಳ್ಳಬೇಕಾದ್ದಿಲ್ಲ. ಈಗಂತೂ. ಪತ್ರಿಕೆಗಳಲ್ಲಿ ಏನೇನು ಅಡಕವಾಗಿರಬೇಕೆಂಬುದನ್ನು ಜಾಹಿರಾತುದಾರರೂ ವಾಚಕ ಮಹಾ ಶಯರೂ ಅದನ್ನು ಮಾರುವ ಏಜಂಟರೂ ನಿರ್ಧರಿಸುವ ಕಾಲ. ಆಯಾ ಊರಿನ ಅಂದಂದಿನ ಸ್ಥಳಪುರಾಣದಿಂದ ಒಂದೆರಡು ಸ್ವಾರಸ್ಯವಾದ ಸುದ್ದಿಯನ್ನು ಪ್ರಕಟಿಸದ ಪೇಪರನ್ನು ಅಲ್ಲಲ್ಲಿಯ ಏಜಂಟರು ಮಾರುವಂತೆಯೇ ಇಲ್ಲ. ಜಾಹಿ ರಾತುಗಳಿಗೆ ವಿರೋಧವಾದ ಟೀಕೆ ವಿಮರ್ಶೆಗಳನ್ನು ಸಂಪಾದಕರು ಅಚ್ಚು ಹಾಕಿಸಿದರೆ, ಅನ್ನಕ್ಕೆ ಕಲ್ಲುಬಿದ್ದಂತೆಯೇ! ವಾಚಕವೃಂದಕ್ಕೆ ಬೇಕಾದದ್ದು, ತಮ್ಮ ಕೈಲಾಗದ ಕೆಲಸಗಳನ್ನು ಓದಿನಿಂದಲೇ ಪೂರೈಸುವ ಸದವಕಾಶ. ಬಡವರಿಗೆ ಶ್ರೀಮಂತರ ವಜ್ರದ ಬೆಂಡೋಲೆ ಮೇಲೆ ಕಣ್ಣು! ಅದರ ಬೆಲೆ ಏರಿತೆಂದರೆ ತೃಪ್ತಿ; ಅದು ಕಳೆದುಹೋಯಿತೆಂದರೆ, ಖುಷಿ! ಶ್ರೀಮಂತರಿಗೆ ರೈತರ ಸುಖನಿದ್ದೆಯ

ಮೇಲೆ ಆಸೆ. ಪತಿವ್ರತೆಯರಿಗೆ ಸೂಳೆಯರ ತಳಕಿನ ವಿವರಣೆಯನ್ನೋದಲು ಕುತೂಹಲ; ಸೂಳೆಯರಿಗೆ ಕುಲಸ್ತ್ರೀಯರ ನೆಮ್ಮದಿ ಅತ್ಯಗತ್ಯ. ಕಳ್ಳತನ ಮಾಡಲು ಧೈರ್ಯ ಸಾಲದ ಸತ್ಯವಂತರಿಗೆ ಕಾಳಪೋಕರಿಗಳ ಜೀವನ ಕಥೆಯೇ ರುಚಿಸುವುದು. ಪೋಲೀಸಿನವರಿಗೆ ಪತ್ತೆದಾರಿ ಕಥೆ ಕುಂಡರೆ ಆಕರ್ಷಣೆ. ಸಂನ್ಯಾಸಿಗಳಿಗೆ ಮನೋರಮಾ....ಮರ್ದನ ಎಂಬ ಗ್ರಂಥವನ್ನು ಪಠಿಸಲು ಆಸೆ; ಮನೋರಮೆಯರಿಗೆ ರಾಸ್‌ಪುಟಿನಂಥ ರಾಸ್ಕಲ್‌ಗಳ ಸಾಹಸ ಮನೋಹರ. ವರ್ತಮಾನ ಕಾಲದಲ್ಲಿ ದಾರಿ ಕಾಣದ ದರಿದ್ರರಿಗೆ 'ಭವಿಷ್ಯದ ಶ್ರೀಯ ಮೇಲಿನ ಆಸೆ, ಮುದುಕರಿಗೆ ಪ್ರಗತಿ ಸಾಹಿತ್ಯ, ಕುರುಡರಿಗೆ ಒಣ ವೇದಾಂತ, ಬಡ ಮಕ್ಕಳಿಗೆ ಮಂತ್ರಿಕುಮಾರಿಯನ್ನು ರಾಜಕುಮಾರ ಮದುವೆಯಾದ ಕಟ್ಟು ಕಥೆ, ಬೆಳೆದವರಿಗೆ ಬೆಣ್ಣೆ ಕೃಷ್ಣನ ಲೀಲಾ ವಿನೋದದ ಪುರಾಣ....ಹೀಗೆ, ವಿಧ ವಿಧವಾಗಿ ಒದಗಿಸುತ್ತಿದ್ದರೆ ಸಾಕು....ಆದರೆ, ನಾನು ಏತಕ್ಕೆ ಇದಕ್ಕಾಗಿ ತಲೆ ತುರಿಸಿಕೊಳ್ಳುವುದು? ನಾನು ಶಂಖವಾದ್ಯದ ಉಪಸಂಪಾದಕ, ತಾನೆ? ಅದರ ಮಾಲೀಕ, ಅದರ ಸಂಪಾದಕ, ಹೇಳಿದಷ್ಟು ಚಾಕರಿ, ಹಾಕಿದಷ್ಟು ಹುಲ್ಲು...., ಎಂದು ಅವನು ತನ್ನ ತಲೆಯಿಂದ ಆ ವಿಚಾರವನ್ನು ಕೊಡಹಿದ.

ಅಷ್ಟರಲ್ಲಿ ನಾಗರಾಜನ ಕಿವಿಗೆ ಕನ್ನಡ ಕೇಳಿಸಿತು! ಯಾರೋ ಇಬ್ಬರು ಅಚ್ಚಕನ್ನಡದಲ್ಲೇ, ಡಬ್ಬಿಯ ಬೆಂಚಿನಮೇಲೆ ಕುಳಿತು, ಜಗಳವಾಡುತ್ತಿದ್ದರು. ಅಸಭ್ಯ ಅಶ್ಲೀಲ ಅಸಹ್ಯ ಮಾತುಗಳಾಗಿದ್ದರೂ, ಅವನ್ನು ಕೇಳಿ ಕಿವಿ ಮುಚ್ಚಿಕೊಳ್ಳಲು ನೀರಜ ಅಲ್ಲಿಲ್ಲದ್ದಕ್ಕೆ ಅವನು ಸಂತೋಷಪಟ್ಟನಾದರೂ, ತಾನು ಕನ್ನಡ ನಾಡಿಗೆ ಬಂದಿರುವೆನು, ಈಗ ತನ್ನ ಎದೆಯನ್ನು ತುಂಬುತ್ತಿರುವುದು ಕನ್ನಡದ ಬಿಸಿ ಉಸಿರು ಎಂಬ ಅರಿವುಂಟಾಗಿ, ನಾಗರಾಜ ನಲಿದಾಡಿದ....ಬೆಳಗಾವಿಗೆ ಬಂದು ಗಾಡಿ ನಿಲ್ಲುತ್ತಲೂ, ಹಲವರು ಇಳಿದುಹೋದದ್ದರಿಂದ ನಾಗರಾಜ ನೀರಜಳನ್ನು ತನ್ನ ಗಾಡಿಗೆ ಕರೆದುತಂದು ಕೆಳಗಿಳಿದು ಪಕ್ಕದಲ್ಲೇ ಕೂರಿಸಿಕೊಂಡ. ಅಲ್ಲಿಂದ ಮುಂದಕ್ಕೆ ಅವನು ಅವಳಿಗೆ ಕನ್ನಡ ನಾಡ ಕೀರ್ತಿ ವಿಸ್ತೀರ್ಣ ಕಲೆ ಸಂಪತ್ತು ಭವಿಷ್ಯ ಇವುಗಳನ್ನು ವಿವರಿಸಿದ. ಆದರೆ, ಆ ಎಂಟು ತಿಂಗಳ ಬಸುರಿಗೆ ಆಗ ಬೇಕಾಗಿದ್ದದ್ದು ನಿದ್ದೆ! ಅವಳಿಗೆ ಸುಸ್ತು, ಬೇಸರ. ಮೇಲಾಗಿ ಕಳವಳ. ಮುಂದೆ ಬಾಣಂತನ ಮುಗಿಸಿ ವೆಂಗಡೂರಿನಲ್ಲಿ ಅತ್ತೆಯ

ನೆರಳಲ್ಲಿ, ಅಥವಾ, ನೆರೆಯಲ್ಲಿ ಸಂಸಾರ ಹೂಡುವುದರ ಬಗ್ಗೆ ಚಿಂತೆ. ಶಂಖ ವಾದ್ಯದಿಂದ ಎಷ್ಟು ಸುಖ ಸವಿಯಬಹುದು ಎಂಬ ಆತಂಕ.

'ಶಂಖವಾದ್ಯ'ದಲ್ಲಿ ಕೆಲಸ ದೊರಕಿಸಿಕೊಂಡು, ನಾಗರಾಜ, ಅತ್ತೆ ಮನೆಯ ಸುತ್ತಮುತ್ತ ತನ್ನನ್ನು ನೆಲೆಗೊಳಿಸುವ ಪ್ರಯತ್ನಮಾಡಿದ್ದು, ಅವಳಿಗೆ ಸುತರಾಂ ಸರಿಬೀಳಲಿಲ್ಲ. ಅವಳ ಮನಸ್ಸು ಯೋಚನಾತರಂಗಗಳಲ್ಲಿ ಮುಳುಗಿತ್ತು....ಅವಳ ಸ್ವಭಾವವೇ ಒಂದು ವಿಶೇಷ ರೀತಿಯದು. ನೀರಜಳ ತಂದೆಯನ್ನು ನೀವು ವಿಚಾರಿಸಿದರೆ, ಅವರು ತಮ್ಮ ಮಗಳನ್ನು ಹಟಮಾರಿ ಎಂದು ದೂಷಿಸುತ್ತಿದ್ದರು. ಎಸ್ಸೆಸ್ಸೆಲ್‌ಸಿ ಆಗುತ್ತಲೂ, ಅವಳ ಓದು ನಿಲ್ಲಿಸಿ, ಅವರು ಅವಳಿಗಾಗಿ ಗಂಡು ಹುಡುಕಲು ಪ್ರಾರಂಭಿಸಿದ್ದರು, ಮುಂದಿನ ಓದಿಗೆ ಮಾವನ ಅಪ್ಪಣೆ ದೊರೆಯಬೇಕಲ್ಲಾ ಎಂದು. ಕಾಲೇಜಿಗೆ ಸೇರಿದರೆ, ಹೇಗೋ, ಏನೋ? ಕನ್ನಡ ಮಾಸಿಕೆಗಳಲ್ಲಿ ಬರುವ ಕಥೆಗಳಲ್ಲೂ, ಎಲ್ಲ ಸಿನಿಮಗಳಲ್ಲೂ, ಹರಿಕಥೆಗಳಲ್ಲೂ, ಕಾಲೇಜು ಹುಡುಗಿಯರನ್ನು ಅವಹೇಳನಮಾಡಿ ಅವರ ಗುಣಶೀಲಗಳನ್ನು ಕಟುವಾಗಿ ಟೀಕಿಸುತ್ತಿರುವುದರಿಂದ, ತಮ್ಮ ಸ್ವಂತ ಹೊಣೆಗಾರಿಕೆಯ ಮೇಲೆ ಅವಳನ್ನು ಮುಂದಕ್ಕೆ ಓದಿಸುವುದಕ್ಕೆ ನೀರಜಳ ತಂದೆ ಹಿಂಜರಿದರು. ನೀರಜಳನ್ನು ಅವರು ಗಿಣಿಯಹಾಗೆ ಸಾಕಿದ್ದರು; ಆದ್ದರಿಂದ, ಆದಷ್ಟು ಬೇಗ ಅವಳನ್ನು ಒಂದು ಪಂಜರದೊಳಕ್ಕೆ ಸೇರಿಸಲು ಅವರು ಶ್ರಮಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ. ನೀರಜಳಿಗೂ ಕೂಡ, ಮದುವೆ ಎಂದರೆ, ಮುಖಕ್ಕೆ ಬಣ್ಣವೇರುತ್ತಿತ್ತು. ಅವಳ ಬಹು ದಿನದ ಗೆಳತಿ, ಗೋಪೀಬಾಯಿ ಹಾಗೂ ಅವಳ ಹಸ್‌ಬಂಡ್ ಹಯಗ್ರೀವ್ ಇವರು, ಅನ್ಯೋನ್ಯವಾಗಿ ಇಬ್ಬರೂ ಕಣ್ಣು ಮಿಟಕಿಸುತ್ತ ಒಂದೇ ಬಟ್ಟಲಿಂದ ಕಾಫಿ ಕುಡಿಯೋದು, ಕೈಗೆ ಕೈಕೊಟ್ಟುಕೊಂಡು, ಪಟಪಟನೆ ಟಾರ್ ರಸ್ತೆಯ ಮೇಲೆ ಸಿನಿಮಾಗೆ ಹೋಗುತ್ತಿದ್ದದ್ದು ಇವನ್ನು ನೋಡಿ, ಗೃಹಸ್ಥ ಜೀವನವೆಂದರೆ, ಎಳೆಬೆಳದಿಂಗಳಲ್ಲಿ ಹಾಲುಜೇನಿನ ಹೊಳೆಯ ಮೇಲೆ ಸಕ್ಕರೆ ದೋಣಿಯಲ್ಲಿ ಕುಳಿತು ತೇಲುವ ವಿಲಾಸ ವಿಹಾರ ಎಂದು ಅವಳು ಭಾವಿಸಿದ್ದಳು. ಪ್ರೇಮ ಕಥೆಗಳಲ್ಲಿ ಓದಿದ ಆದರ್ಶ ಪತಿರೂಪವನ್ನೇ ಅವಳು ಅರಸಿದಳು. ಹೆಣ್ಣು ನೋಡುವುದಕ್ಕೆ ಬಂದ ಹತ್ತಾರು ಬಿಂಕದ ಸಿಂಗಾರ ಪುಟ್ಟಸಾಮಿಗಳನ್ನು ಅವಳು. "ಸೊಟ್ಟ ಮೂಗು, ಬೊಟ್ಟು ಕಣ್ಣು, ಬೆಟ್ಟ ಮೈ, ಮಂಕು ಮೂತಿ, ಲಾಂಬಿ ಕಿವಿ, ಎಂದು ಮುಂತಾಗಿ ತೆಗಳಿ ದೂಡಿದ್ದಳು. ಹಯಗ್ರೀವ್

ನಷ್ಟೇ ಕಿರುಮಿಸೆ ಹೊತ್ತ ದಪ್ಪ ಮುಖವೊಂದನ್ನು ಅವಳು ಬಯಸಿದ್ದಳು. ಅವನಷ್ಟೇ ಪ್ರೇಮ ಬೀರಬಲ್ಲ ನಾಯಕನೇ ಅವಳ ಕನಸಿನ ನಾಥ. ಆದರೆ, ಜಗತ್ತಿನಲ್ಲಿ ೨೦೦ ಕೋಟಿ ನರರಿದ್ದರೂ ಒಬ್ಬರ ಹಾಗೆ ಮತ್ತೊಬ್ಬರಿಲ್ಲ! ಹಯಗ್ರೀವ್‌ನ ಪಡಿಯಚ್ಚು ಅವನು ಹುಟ್ಟಿದಾಗಲೇ ಪುಡಿಪುಡಿ!

ನೀರಜಳಿಗಾಗಿ ಅವಳ ತಂದೆ ಆರಿಸಿತಂದ ವರಗಳೆಲ್ಲ ಅವರವರ ಮನೆಗಳಿಗೆ ತೆರಳಿದರು. 'ನೀನು ಅಹಲ್ಯೆ ಕಣೆ! ನಿನಗೆ ಸ್ವರ್ಗದಿಂದ ಆ ಇಂದ್ರನೇ ಬರಬೇಕೋ, ಏನೋ ?' ಎಂದು ಹೇಳುತ್ತ, ಅವಳ ತಾಯಿ ತಂದೆಯರು ನಿಟ್ಟುಸಿರು ಬಿಟ್ಟು ಊಟ ನಿದ್ದೆಗಳನ್ನು ನಡೆಸಿದರು.... ಕಡೆಗೆ, ಒಂದು ದಿನ ನೀರಜ ನಾಗರಾಜನನ್ನು ಒಪ್ಪಿದಳು! ಸಾಹೇಬರ ಮನೆ, ಕಾರೊಡೆಯನ ಮಗ, ಎಂದು ಕೇಳಿದಾಗ, ಅವಳ ಬಾಯಲ್ಲಿ ಬೀರೂರಿತು. ಅಲ್ಲದೆ, ನಾಗರಾಜ ಅರವತ್ತೆಂಟಂಗುಲ ಎತ್ತರದ, ಮೂವತ್ತಾರಂಗುಲ ಸುತ್ತಳತೆಯ ಪುರುಷಾಮೃಗ! ತಕ್ಕಮಟ್ಟಿಗೆ, ಸ್ಫುರದ್ರೂಪಿ. ಹಯಗ್ರೀವನಲ್ಲದಿದ್ದರೂ, ಹಯ!

ಆದರೆ, ಅವಳಿಗೆ ಬಯಸಿದಷ್ಟು ಫಲಿಸಲಿಲ್ಲ. ನಾಗರಾಜ ಹಯಗ್ರೀವ್‌ನಂತೆ ಇಂಗ್ಲಿಷ್ ಮಾತನಾಡಲಿಲ್ಲ. ಆಡಿದರೂ, ಅವನ ಗ್ರಾಮರು ಬಹು ಗ್ರಾಮ್ಯ. ಅವನು ಕನ್ನಡದಲ್ಲೇ ಪ್ರೇಮಿಸುವ ಗಮಾರ. ಸಾಹೇಬ ಮಾವನ ಕಾರೋ, ಅವರನ್ನು ಅತ್ತಿತ್ತ ಸಾಗಿಸುವುದರಲ್ಲೇ ಸದಾ ಪರದಾಡುತ್ತಿತ್ತು. ಅದರಲ್ಲಿ ಒಂದು ದಿನವೂ ಅವಳನ್ನು ಕೂರಿಸಿಕೊಂಡು ಸಿನಿಮಾಗೆ ಹೋಗಲು ನಾಗರಾಜನಿಗೆ ಧೈರ್ಯ ಬರಲಿಲ್ಲ. ನಾಗರಾಜ ಎಲ್ಲ ಕನ್ನಡ ಚಿತ್ರಗಳನ್ನೂ ಕಣ್ಣು ಮುಚ್ಚಿಕೊಂಡು ನೋಡುವ ಭಾಷಾಭಿಮಾನಿ! ನೀರಜಳಿಗೆ ಅಲ್ಲಿ ತನ್ನ ಪ್ರೀತಿಯ ಹಿಂದಿ ಹಾಡುಗಳನ್ನು, ಕನ್ನಡದಲ್ಲಿ ಕೇಳುವಾಗ, ಕಿವಿ ಉರಿಯುವುದು. ಮೆಂಗಡೂರಿನ ಹಳ್ಳ ಕೊಳ್ಳಗಳ ಮೇಲೆ ಗಡಗಡಾಯಿಸುತ್ತ ಆ ಊರಿನ ಜಟಕಾಗಳಲ್ಲಿ ಹೋಗುವುದಕ್ಕಿಂತ, ಲಕ್ಷಣವಾಗಿ ಗಂಡಹೆಂಡತಿ ನಡೆದುಹೋಗುವುದೇ ವಾಸಿ ಎಂದು ನೀರಜ ಹೇಳಿದ ಮೇರೆಗೆ, ಅವಳ ಮಾತನ್ನೇ ಆಧಾರವಾಗಿ ಉಪಯೋಗಿಸಿಕೊಂಡು, ನಾಗರಾಜ ಉದ್ದಕ್ಕೂ ಅವಳನ್ನು ನಡೆಯಿಸಿಕೊಂಡೇ ಹೋಗುತ್ತಿದ್ದ! ಆಗ ನೀರಜ, ಕವಿ ನಾರಣಪ್ಪ ಹೇಳುವಹಾಗೆ, 'ರೋಷಾಯುಧವ ಮಸೆದಳು, ಧಾರೆಗಂಗಳಲಿ!' ನಾಗರಾಜ ಓದುತ್ತಿದ್ದ ಕನ್ನಡ ಕಾದಂಬರಿಗಳಲ್ಲಿ ನೀರಜಳಂತಹ ಕಥಾನಾಯಕಿಯನ್ನು ಪ್ರೇಮಪುರಸ್ಸರವಾಗಿ,

ಪರಿಮಳದ ಪುತ್ಥಳಿಯಂತೆ, ಓಲೈಸುವ ನಾಯಕರ ದೀರ್ಘವಿವರಣೆಯಿಲ್ಲದಿರುವುದರಿಂದಲೇ ಅವನು ತನ್ನ ಸುತ್ತ ಒಂದು ಶೀತವಲಯವನ್ನು ಸೃಷ್ಟಿಸುತ್ತಿದ್ದನೆಂದು ಅವಳು ಕೊರಗಿದಳು. ಗಂಡನ ನೈಜವಾದ ಒಲವಿನ ಆಳವನ್ನು ಅವಳು ಅರಿಯಳು....ಆಗ, ನಾಗರಾಜ, ಕಿಟಕಿಯಾಚೆ ಕೈತೋರಿಸಿ "ನೋಡು! ನೋಡು! ನೋಡೆ! ಕಾಡುಕೋಳಿ!....ಅಕೊ!" ಎಂದ. ಅವಳ ದೃಷ್ಟಿ ಕಾಡುಕೋಳಿಯ ಕಡೆ ಹರಿಯಲೇ ಇಲ್ಲ...."ಅತ್ತೆ ಕೊಟ್ಟ ಹಿಂಸೆಗೆಲ್ಲ ನಾಗರಾಜ ತನ್ನ ಸಂಗಡ ಸಂತಪಿಸಿದನಾದರೂ, ಆಗ, ಬೇರೊಂದು ಮನೆಯನ್ನು ಬಾಡಿಗೆಗೆ ತೆಗೆದು ಅಲ್ಲಿ ಪ್ರತ್ಯೇಕ ಸಂಸಾರ ಹೂಡುವ ತನ್ನ ಪಿತೂರಿಗೆ ಅವನು ಕಿವಿಗೊಟ್ಟಿರಲಿಲ್ಲ....ಬಾತ್ಮಿ ಕೂಡಿಸುವ ಕೆಲಸ ದಾಂಪತ್ಯ ಜೀವನಕ್ಕೆ ತಕ್ಕುದಲ್ಲ. ಬೆಳಗ್ಗೆ ಪೋಲೀಸ್ ಸ್ಟೇಷನ್ ಮಧ್ಯಾಹ್ನ ಕೋರ್ಟ್ ಕ್ರಿಕೆಟ್ ಫೀಲ್ಡು ಸಂಜೆ ಟೀ ಪಾರ್ಟಿ ರಾತ್ರಿ ಸಂಗೀತ ಕಚೇರಿ—ಹೀಗೆ ಓಡಾಡುತ್ತ, ಮನೆಯಲ್ಲಿ ಕಾದು ತಣ್ಣಗಾಗುವ ಸತಿಯರನ್ನೇ ಗಂಡಂದಿರು ಮರೆತುಬಿಡುತ್ತಾರೆ.... ಬೊಂಬಾಯಲ್ಲಂತೂ,....ಆಗ ನಾಗರಾಜ, "ನೋಡು! ಗಂಧದ ಮರ! ನೋಡೆ! 'ಗಂಧದ ಗುಡಿಯದು, ಮೈಸೂರು'!" ಎಂದು ಅವಳ ಗಮನವನ್ನು ಮರಕ್ಕೆಳೆದ. ನೀರಜ ತನ್ನ ಅರೆಮುಚ್ಚಿದ ಕಣ್ಣುಗಳನ್ನು ಅತ್ತ ಕಡೆ ಹೊರಳಿಸಲೇ ಇಲ್ಲ...."ಬೊಂಬಾಯಲ್ಲಂತೂ ಇವರು ನನ್ನನ್ನು ಒಂದು ದಿನ ಒಂದು ಹೊತ್ತಾದರೂ ಆ ಬೋನಿನಿಂದ ಬಿಡಿಸಿ, ನೋಟ ತೋರಿಸಲೇ ಇಲ್ಲವಲ್ಲಾ! ನಮ್ಮಣ್ಣನ ಕೃಪೆಯಿಂದ ನಾನು ಸಮುದ್ರ ನೋಡಿದೆ;....ಏನೋ ಮಹಾ! ಇವರಿಗೂ ಇವರ ತಾಯಿಗೂ ನಾನೇ ಜಗಳ ತಂದಿಟ್ಟಹಾಗೆ! ಇವರು ಎಂದಾದರೊಂದು ದಿನ ಕೆಮ್ಮನೆ ಕೂತು ಕೆಮ್ಮಿದರೆ ಸರಿ, ಕ್ಷೌರ ಮಾಡಿಕೊಳ್ಳುವಾಗ ಕೆನ್ನೇಲಿ ಕೆನ್ನೀರು ತರಿಸಿಕೊಂಡರೆ ಸರಿ, ತಗ್ಗಿ ನಡೆಯಲಾರದೆ ತೊಲೆಗೆ ಹಣೆ ಹೊಡೆದುಕೊಂಡರೆ ಸರಿ, ನಮ್ಮ ಪ್ರಾಣವೇ ಹಾರಿಹೋದಷ್ಟು ಭಯ ತೋರಿಸಿಕೊಂಡು ನಾವು, ಹೇಗಿದೆ ಏನಾಯಿತು, ಅಂತ ಇವರ ಸುತ್ತ ಸುಳಿಯಬೇಕು ನೀಲಗಿರಿ ತೈಲ, ಬೋರಿಕ್ ಪುಡಿ, ಡಬ್ಬಿ ಸ್ನೋ, ಐಯೊಡೀನು ಹಿಡಿದು ನಮ್ಮ ಬುದ್ಧಿ ಉಪಯೋಗಿಸಿ ನಾವು ಇವರಿಗೆ ಒಳ್ಳೆಯ ಸಲಹೆ ಹೇಳಿದರೆ, ತಮ್ಮ ತಲೆಯೊಳಗೆ ಅದು ಆಗಲೇ ತುಂಬಿತ್ತು ಅನ್ನುವಹಾಗೆ, ಥ್ಯಾಂಕ್ಸೆಂದು ಕಿರೂಕಿರು ಹುಸಿ ನಗೆ ಚೂರೊಂದನ್ನ ನಮ್ಮ ಕಡೆಗೆ ಎಸೆಯುತ್ತಾರೆ! ಎಂಥ ತಿಂಡಿ

ಮಾಡಿ ತಟ್ಟೆ ತುಂಬ ಸನ್ನಿಧಾನಕ್ಕೊಪ್ಪಿಸಿದರೂ, ನಮ್ಮಮೇಲೆ ಪರಮಾನುಗ್ರಹ ಮಾಡುವವರಹಾಗೆ ಗಬಕ್ಕನೆ ನುಂಗಿಬಿಟ್ಟು ನಮ್ಮೆದುರಿಗೆ ಹಳೇ ಹುಳಿಮೋರೇನೇ ಹಿಡಿಯುವುದು ! ನಾವು ಅತ್ತಲಾಗೆ ಹೊರಟೆವು ಅಂದರೆ, ತಟ್ಟೆಯನ್ನೇ ನೆಕ್ಕಿ, ಅದರ ದಪ್ಪಾನ ಅರ್ಧಕ್ಕರ್ಧ ಇಳಿಸಿಬಿಡೋದು. ಊರೆಲ್ಲ ಓಡಾಡುತ್ತಾರೆ, ಇಂಗು ತಿಂದ ಕಪಿಯಹಾಗೆ!....ನಳದಿಂದ ಎರಡು ಕೊಡ ನೀರು ತನ್ನಿ, ದಯವಿಟ್ಟು, ಸೊಂಟ ಹಿಡಿದಿದೆ, ಎಂದರೆ ಸರಿ, ಬಂತು ಇವರಿಗೆ ಮೈ ಎಲ್ಲ ಬೇನೆ, ಬಂಡೆ ಗುಂಡಿಗೆ, ಗಂಡಸರದು ! ಅಬ್ಬಬ್ಬ !....ಆಗ....ಮೈ ಇಳಿದಾಗ, ಕನ್ನಡ ಬಾವುಟ ಏರಿಸುತ್ತೇನೆ, ಊರಿಗೆಲ್ಲ ಹಬ್ಬಮಾಡುತ್ತೇನೆ, ಅಂತ ಕುಣಿದಾಡುತ್ತ ಬೊಂಬಾಯೆಲ್ಲ ಬೊಬ್ಬೆ ಹಚ್ಚಿದ್ದರು, ಇವರು! ಇವರ ಧಾವಂತ ಇವರಿಗೆ ; ಔಷಧಿ ತರೋದಕ್ಕೆಲ್ಲ ನಮ್ಮಣ್ಣನೇ ಆಗಬೇಕು !....ನೀರಜಾ! ನೀರೂ ! ನೀರೀ !....ಓಹೋಹೋ, ನಾಟಕದ ಕಂಪನಿ ನಟನೆ ಎಲ್ಲ ಕಲಿತುಬಿಟ್ಟಿದಾರೆ. ನಾನು ರೇಗಿದ ದಿವಸ ಇದ್ದದ್ದೂ ಜಾಸ್ತಿ....ತೊದಲುವುದು !....ಎಲ್ಲರ ಪಾಡೂನೂ ಹೀಗೇಯೇ ಏನೊ ? ಮೇಲು ಮೇಲಕ್ಕೆ ಗೋಪೀಬಾಯಿ ಹಯಗ್ರೀವ್ ಅಷ್ಟು ಅನ್ಯೋನ್ಯವಾಗಿದಾರೆ, ಕವಿತೆಲಿ ಬರುವ ಕಪೋತ ಕಪೋತಿಯರಹಾಗೆ....ಆದರೆ, ಗೋಪಿ ಕೂಡ ನನ್ನಹಾಗೆ ಕುದಿಯುತ್ತಿದಾಳೋ, ಏನೋ ? ನಾನೂನೂ ನನ್ನ ಕಷ್ಟವನ್ನ ಗಂಟಲಲ್ಲೇ ಹಿಡಿದು ನಿಲ್ಲಿಸಿ, ತುಟಿಗೆ ಬೀಗ ಹಾಕಿದೇನೆ. ಅವಳೂ ಹಾಗೆಯೇ ಇರಬೇಕು...." ಎಂದೆಲ್ಲ ನೀರಜ ನೆನೆದು ಬಿಸುಸುಯ್ದಳು.

"ಏಕೆ ? ನೀರೀ ! ಸುಸ್ತೇನು ? ಸ್ವಲ್ಪ ಜಾಗ ಮಾಡುತ್ತೇನೆ. ಹಾಗೆಯೇ, ಕೊಂಚ ಮಲಗು" ಎಂದು ನಾಗರಾಜ ಪ್ರೀತಿಯಿಂದ ಮಾತನಾಡಿಸಿದ. "ತಲೆ ಸಿಡಿತ, ಅಂತ ಕಾಣುತ್ತೆ, ಪಾಪ !....ಏನು ಮಾಡೋದು ? ಮಲಗಿದರೆ ಕಪಾಲಕ್ಕೆ ಸುತ್ತಿಗೆ ಹೊಡೆದಹಾಗೆ ಈ ಹಾಳು ಚಕ್ರದ ಸದ್ದು ಬೇರೆ....ಕೆಳಗಿಂದ...." ಎಂದು ಅವನು ಕಂಬಿ ನಡುವಣ ಬಿರುಕನ್ನು ಬೈದ.

# ಎಲೆ ಮುಂದಿನ ಮಣೆ

ಮಹಾಬಲರಾಯರು ಆ ರಾತ್ರಿ ಊಟಕ್ಕೆ ಕುಳಿತ ಧಾಟಿಯೇ ಹೊಸ ಬಗೆಯದು.... ಸಾಮಾನ್ಯವಾಗಿ ಅವರು ಊಟಕ್ಕೆಂದು ಒಳಗೆ ಹೊಟ್ಟೆ ನೀಡುವಾಗ ಹೊರಗಡೆ, ಹಜಾರದಲ್ಲೂ, ಹಾಲಲ್ಲೂ, ಹತ್ತಾರು ಜನರು ಚಂದಾ ಪಟ್ಟಿ, ವಾರ್ಷಿಕ ವರದಿ, ಶಿಪಾರ್ಸು ಕಾಗದ ಸಮೇತವಾಗಿ, ಕಾದು ಕಣ್ಣು ಜ್ಜಿಕೊಳ್ಳುತ್ತಿದ್ದರು. ಆದ್ದರಿಂದ, ಅವರು ತಮ್ಮ ಮಣೆ ಮುಂದಿನ ಬೆಳ್ಳಿ ತಟ್ಟೆಯಲ್ಲಿ ಏನಿದೆ ಏನಿಲ್ಲ ಹೇಗಿದೆ ಹೇಗಿಲ್ಲ ಎಂಬುದರ ಅರಿವೇ ಇಲ್ಲದೆ, ಅರಿಯಲು ಉತ್ಸುಕತೆಯನ್ನೂ ಸಹ ತೋರಿಸದೆ, ಹಾಕು ಬೇಕು ಎಂದು ನಾಲಗೆ ಚಾಚದೆ ಕೈಗೆ ಸಿಕ್ಕಿದ್ದನ್ನು ಬಾಯಿಗೆ ತುರುಕಿ ನಡುನಡುವೆ ನೀರು ಕುಡಿದು ನುಂಗಿ, ಮೊಸರನ್ನಕ್ಕೆ ಮೊದಲೇ ಆಪೋಶನ ತೆಗೆದುಕೊಂಡು ಕೈತೊಳೆದು ಟವಲನ್ನು ಹೆಗಲ ಮೇಲೇರಿಸಿ ಏಳುತ್ತಿದ್ದರು. ಸಾಹೇಬತನಕ್ಕೆ ಸಹಜವಾದ ಇಂತಹ ಅವಸರದ ಊಟದಿಂದ ಜಠರಾಗ್ನಿ ನಂದಿ ಜೀರ್ಣಶಕ್ತಿ ಕುಂದಿ ನಾನಾರೋಗಗಳು ಪ್ರಾಪ್ತವಾಗಿ ಅನೇಕ 'ಬಿರುದಾಲಂಕೃತ'ರು ತಾವು ರಿಟೈರಾದ ಒಂದೆರಡು ವರ್ಷಗಳಲ್ಲೇ ಹರ ಹರ ಎನ್ನುವರು ಎಂದು ಚಂಚು ಹೇಳುತ್ತಿದ್ದಳು. ವೈಷ್ಣವರಾದ ತಾವೂ ಎಲ್ಲಿ ಹೀಗೆಯೇ ಕಡೆಗೆ ತಮ್ಮ ಇಷ್ಟದೇವತೆಯನ್ನೇ ಮರೆತು ಹರ ಹರ ಎಂದು ಹೊರಡಬೇಕಾಗುತ್ತದೋ ಎಂಬ ಭಯ ಅವರಿಗೆ ಆಗತಾನೇ ಅಂಕುರಿಸಿತ್ತು. "ಹೊರಗಡೆ ಕಾದಿರುವವರು, ಅವರ ಕೆಲಸ ಸಾಧಿಸುವ ಸಲುವಾಗಿ ಕಾದೇ ಇರುತ್ತಾರೆ; ಅವರಿಗಾಗಿ ಊಟ ಧಾವಿಸಿ ನೀವು ನಿಮ್ಮ ಆಯುಸ್ಸು ಕಡಮೆಮಾಡಿಕೊಳ್ಳಬೇಡಿ; ನಿಮ್ಮ ಭಾವನವರನ್ನು ಕೇಳಿ, ಬೇಕಾದರೆ,.... ಗಳಕ್ಕನೆ ಉಂಡವನು ರೋಗಿ, ಗಳಿಗೆ ಉಂಡವನು ಭೋಗಿ—ಅಂತ ಗಾದೆಯೇ ಇದೆಯಲ್ಲ" ಎಂದು ಚಂಚು ನಗುತ್ತಾ ಹೇಳುವಳು. ಆದರೂ ಹಜಾರದಲ್ಲಿ ಹೊಟ್ಟೆಗಳು ಸಾಲಾಗಿ ತಾಳ ಹಾಕುತ್ತಿದ್ದರೆ, ಒಳಗಡೆ ರಾಯರಿಗೆ ಊಟದ ಮೇಳ ಸರಿಯಾಗಿ ಕೂಡಿಬರುತ್ತಿರಲಿಲ್ಲ.... ಹೇಗೆ ಬಂದೀತು ?

ಆ ರಾತ್ರಿ, ಸದ್ಯಃ ಯಾರೊಬ್ಬ ಅಹವಾಲಿಗನ ಸುಳಿವೂ ಇಲ್ಲ. ಇನ್ನು ಮೇಲೆ, ಭೋಜನಶಾಸ್ತ್ರ ರೀತ್ಯಾ, ಎಲ್ಲ ಪದಾರ್ಥಗಳನ್ನೂ ನೋಡಿ

ಆನಂದಿಸಿ, ಮುಟ್ಟಿ ಸುಖಪಟ್ಟು, ಎತ್ತಿ ಬಾಯಿಗಿಟ್ಟು ಮೂಗು ಬಗ್ಗಿಸಿ ಮೊಗೆದು, ನಾಲಗೆಯ ಮೇಲೆ ನಾಜೂಕಾಗಿ ಹೊರಳಿಸಿ, ಇತರರ ಸೊಲ್ಲಿಲ್ಲದೆ, ನಿಧಾನವಾಗಿ ಜೊಲ್ಲು ಬೆರಸಿ, ಬಲ ದವಡೆಯಿಂದ ಎಡ ದವಡೆಗೆ, ಎಡ ದವಡೆಯಿಂದ ಬಲ ದವಡೆಗೆ ಮತ್ತೆ ಮತ್ತೆ ಬದಲಾಯಿಸಿ, ಅಗಿದು ಜಗಿದು ಮೆದ್ದು, ಕ್ರಮವಾಗಿ ನುಂಗಿ, ಆಹಾರದ ಸಾರಸರ್ವಸ್ವವನ್ನೂ ಮೈಗೂಡಿಸಬೇಕೆಂದು ಅವರು ನಿಶ್ಚಯಿಸಿದರು. 'ಉದರ ನಿಮಿತ್ತಂ ಬಹುಕೃತ ವೇಷಂ' ಎಂದು ಯಾರೋ ಮಹಾನುಭಾವರು ಎಲ್ಲೋ ಹೇಳಿರುವಂತೆ ಅವರಿಗೆ ಜ್ಞಾಪಕ; ಇನ್ನಾದರೂ, ಸರಸು ದಯೆ ಇದ್ದರೆ, ತುಪ್ಪ ತೊವ್ವೆ ನುಚ್ಚಿನುಂಡೆ ಹಯಗ್ರೀವ....

ಊಟಕ್ಕೆ ಬಡಿಸಿದವಳು ಸರಸು; ಚಂಚುವಾಗಿದ್ದರೆ ರಾಯರ ಹೊಸ ಸಂಕಲ್ಪ ನೆರವೇರಲು ತಕ್ಕ ವಾತಾವರಣ ದೊರೆಯುತ್ತಿತ್ತು. ಸರಸು, ಪಾಪ, ಎಂದಿನಂತೆ, ಅವಳಿಗೆ ಅನೇಕ ವರ್ಷಗಳಿಂದ ಅಭ್ಯಾಸವಾಗಿದ್ದ ಪದ್ಧತಿಯಂತೆಯೇ ಪದಾರ್ಥಗಳನ್ನು ತಂದು ಸರಕ್ಕನೆ ತಟ್ಟೆ ಕಾಣಿಸುತ್ತಿದ್ದಳು. ಆದರೆ, ರಾಯರು, "ನಿಧಾನವಾಗಿ....ನಿಧಾನವಾಗಿ ಬಡಿಸು! ಏನಿದು? ಮೆಯಿಲ್ ಟ್ರೈನಿಗೆ ಹೋಗಬೇಕೇನು?....ಹುಳಿಗೆ ಶೇಕಡ ೨೦ ಉಪ್ಪು ಹೆಚ್ಚು!....ನಿಂಬೆ ಹಣ್ಣಿದ್ದರೆ, ಶೇಕಡ ೫೦ ಕುಯ್ದು ತೆಗೆದುಕೊಂಡುಬಾ, ಸಾರಿಗೆ ಹಿಂಡಿಕೊಳ್ಳುತ್ತೇನೆ....ಒಂದು ಬಟ್ಟಲಲ್ಲಿ ಪ್ರತ್ಯೇಕ, ಇಷ್ಟು, ತಿಳಿಸಾರು ಕೊಡಬಾರದೆ?.... ಎಂಥದ್ದಿದು? ಒಂದಾಣೆಯಷ್ಟು ಸೀದ ವಾಸನೆ?...." ಎಂದು ಟೀಕೆ ಟಿಪ್ಪಣಿ ಪ್ರಾರಂಭಿಸಿದಾಗ, ಸರಸು ಬೆರಗಾದಳು!....'ಚೆನ್ನಾಯಿತು!' ಎಂದು ಮೂಗುತಿ ಮೇಲೆ ಬೆರಳಿಟ್ಟಳು! ಇಳೀ ವಯಸ್ಸಿನಲ್ಲಿ ಈ ರೀತಿ ಭೀಮ ಪ್ರತಿಜ್ಞೆ ಮಾಡಿ, ತಪ್ಪಲೆ ಬರಿದುಮಾಡುವುದಕ್ಕೆ ಹೊರಟಿದಾರಲ್ಲ, ಇವರು? ರಿಟೈರಾದ ಮೇಲೆ ಎಲ್ಲರೂ ತಿಥಿ ನಕ್ಷತ್ರ ನೋಡಿ, ದೇವರು ದಿಂಡರು ಅಂತ, ತಿನ್ನೋದು ಕಡಮೆಮಾಡುತ್ತಾರೆ, ಕೇಳಿದೇವೆ. ದೇವರನ್ನು ಮರೆತೇಬಿಟ್ಟಿದಾರೆ; ಚೌಳಕ್ಕೆ ಹೋದ ತಿರುಪತಿ ಬೆಟ್ಟಕ್ಕೆ, ಮತ್ತೆ, ಇವರು ತಲೆ ತೋರಿಸಲೇ ಇಲ್ಲ. ಆಗ ಬೋಳಿಸಿದ ತಲೆ ಯಥಾ ಪ್ರಕಾರ ಮತ್ತೆ ಬೋಳಾಗಿ ಹೊಳೆಯುತ್ತಾ ಇದೆ, ಈಗ. ಕಾಯೋ ಅಂತ, ಒಂದು ಕಾಯಿ ಒಡೆದಿಲ್ಲ, ಪರಮಾತ್ಮಾ ಅಂತ ಒಂದು ಪ್ರದಕ್ಷಿಣೆ ಮಾಡಲಿಲ್ಲ, ಗುಡಿ ಮುಂದಿನ ಗುಂಪಿನಲ್ಲಿ ಗೋವಿಂದಾ ಅಂತ ಒಂದು

ಸಾರಿ ಅಂದಿಲ್ಲ! ಶೀನಪ್ಪನವರ ಗಾಳಿ ಬೀಸಿರಬೇಕು ಇವತ್ತು! ಕೂತು ತಿನ್ನುವುದೇ ಆತನ ತಪಸ್ಸು! ಮೂರು ಹೊತ್ತೂ ಆ ಪಾಷಂಡಿ ಪಾಠ ಆಗುತ್ತಲೇ ಇದೆಯಲ್ಲಾ! ಶೀನಪ್ಪನವರನ್ನ ಯಾಕೆ ಬೈಯಬೇಕು? ಚಂಚು ಏನು ಕಡಮೆ? ನನ್ನ ಬಲವಂತಕ್ಕೆ ನನ್ನ ಜೊತೆ ಗುಡಿಗೆ ಬರುತ್ತಿದಾಳೆ ಅಷ್ಟೆ! ಗಾಂಧೀ ಪಕ್ಷ ಗಾಂಧೀ ಪಕ್ಷ ಅಂತ ಜಂಬ ಬೇರೆ ಅವಳಿಗೆ ಹೊಲೆಯರನ್ನ ಹೊರಗೆ ನಿಲ್ಲಿಸಿರೋತನಕ, ಹರಿವಾಯುಗಳು ಒಳಗಿಲ್ಲವಂತೆ! ಅವಳೇ ತಾನೆ ಇವರ ಅಮಾತ್ಯ ರಾಕ್ಷಸಿ! ಊರಿನವರಿಗೆಲ್ಲ ಸೂಜಿ ಚುಚ್ಚುವುದು, ಮನೆಗೆ ಬಂದು ನನ್ನ ಮನ ಚುಚ್ಚುವುದು!....ಹೀಗೆ, ಪಾವಕ್ಕಿ, ಸೇರು ಸಾರು ಚಟಾಕು ತುಪ್ಪ ತಿನ್ನೋದು ಮುದಿಮೈಗೆ ಮದ್ದು ಅಂತ ಆ ಮಹಾರಾಯತಿ ಏನಾದರೂ ಬೋಧನೆ ಮಾಡಿದಾಳೊ, ಏನೊ?” ಎಂದು ಸರಸು ಬೆರಗಾದಳು. ಆಗ, ರಾಯರು “ಅಡಿಗೆಗೆ ಯಾರನ್ನಾದರೂ ನೇಮಿಸಲೇ ಬೇಕು! ನಿನ್ನ ಪಾಕ ಶಾಸ್ತ್ರವೆಲ್ಲ ತಲೆಕೆಳಕು....ಶೀನಪ್ಪನಿಗೆ ಹೇಳುತ್ತೇನೆ” ಎಂದು ಹೇಳುತ್ತ, ಎದ್ದರು. ನಾಗರಾಜನ ಸುದ್ದಿ, ಅದನ್ನು ಚುಚು ಮೂಲಕ ತನಗೆ ತಿಳಿಸಿದುದರ ಔಚಿತ್ಯ ಇವುಗಳನ್ನು ಕುರಿತು ರಾಯರೊಂದಿಗೆ ರಂಪ ಎಬ್ಬಿಸಿ, ಕಡೆಗೆ ಅವನನ್ನು ಮನೆಗೆ ಕರೆಸಿಕೊಳ್ಳಲು ಸರಸು ಮಾಡಿದ್ದ ತೀರ್ಮಾನವೆಲ್ಲ ರಿಟೈರ್ಡ್ ಸಾಹೇಬರ ಊಟದ ರಭಸದಲ್ಲಿ, ಅವಳಿಗೆ ಮರೆತೇಹೋಯಿತು.

# ನಿಲ್ದಾಣ

ವೆಂಗಡೂರು ರೈಲು ನಿಲ್ದಾಣದಲ್ಲಿ ಓಡಾಡುವುದೇ ಒಂದು ಸರ್ಕಸ್ಸು! ನಾಲ್ಕಾರು ಕಡೆಗಳಿಗೆ ಹೊರಟು ನಿಂತಿರುವ ಪ್ರಯಾಣಿಕರ ಸಮೂಹ ಅಲ್ಲಲ್ಲೇ ಗುಲ್ಲೋಗುಲ್ಲಾಗಿ ಕುಕ್ಕೆ ಗೂಡೆ ಪೆಟ್ಟಿಗೆ ಮೂಟೆ ರಾಶಿಗಳ ಸಂದುಗಳಲ್ಲಿ ನಿಂತು ಎಡಕ್ಕೂ ಬಲಕ್ಕೂ ಕತ್ತು ನೀಡುತ್ತ ಮುಳ್ಳೇ ಇಲ್ಲದ ಗಡಿಯಾರವನ್ನು ಶಪಿಸುವರು. ತೆಲುಗು ಕನ್ನಡ ಸಂಕೇತಿ ಉರ್ದು ತಮಿಳು ಬಟ್ಲರ್ ಲಬ್ಬೆ ತುಳು ನುಡಿಗಳ ತಮ್ಮ ತಮ್ಮ ಪಶುಗಳ ಸುತ್ತ ಪೋರ್ಟರುಗಳು ಕಾದಾಡುವರು. ಇದ್ದಕ್ಕಿದ್ದ ಹಾಗೆ, ಕೈಗಾಡಿಗಳು ಟ್ರಂಕುಗಳನ್ನು ಹೇರಿಕೊಂಡು ಕಡಪ ಕಲ್ಲುಗಳ ಮಧ್ಯದ ಹಳ್ಳಗಳನ್ನು ಕಟಕಟನೆ ಹಾದು ಪ್ರಯಾಣಿಕರ ಹೆಬ್ಬೆಟ್ಟುಗಳನ್ನು ಅಗಲವಾಗಿಸುತ್ತ ಹರಿದುಬರುವುವು. ನಿಲ್ದಾಣದ ಅಂಗಳದಲ್ಲಿ ಕಂಬಿಸಾಲುಗಳ ಮೇಲೆ ಗೋಳ್ದನಿಗೈಯ್ಯುತ್ತ ಹೋಗುವ ಎಂಜಿನ್ನುಗಳು ಶಿಲ್ಪಿ ಊದುವಾಗಲೆಲ್ಲ ಪ್ರಯಾಣಿಕರಿಗೆ ತಮ್ಮ ರೈಲಿನದೆಂದು ಭಾಸವಾಗಿ, ಅವರು ಅತ್ತ ಕಡೆ ಬೆಡ್ಡಿಂಗುಗಳನ್ನು ಎಳೆಯುವರು. ಕುಚೇಲರೂ ಸುಚೇಲರೂ, ಜಾರ್ಜೆಟ್ಟಿಯರೂ ಜಿನ್ನಿಮಿಲ್ಲರೂ, ಬಡವರೂ ಕಡವರೂ ನೀಲಿ ಟಿಕೀಟಿನವರೂ ಹಳದಿ ಟಿಕೀಟಿನವರೂ ಭುಜಕ್ಕೆ ಭುಜ ಕೊಟ್ಟು, ಕುರುಬನಿಲ್ಲದ ಕುರಿಮಂದೆಯಂತೆ ರೈಲು ಹತ್ತುವಾಗ ನ ಚ ಲಿಂಗಂ ನ ಚ ವಯಃ ಓಡುವರು. ರೈಲು ಹೊರಡಲು ಗೊತ್ತಾದ ಕಾಲಕ್ಕೆ ಸರಿಯಾಗಿ ಮಾತ್ರ ಗಾಡಿಗಳನ್ನು ನಿಲ್ದಾಣಕ್ಕೆ ತರುವುದರಿಂದ ಅರ್ಧ ನಿಮಿಷದ ಅವಧಿಯಲ್ಲಿ ಸಾವಿರಾರು ಜನ ಆ-ಚೀ-ಹೋಲ್ಡಾಲ ಗಾಡಿಯೊಳಕ್ಕೆ ಸರ್ವ ರಂಧ್ರಗಳಿಂದಲೂ ನುಗ್ಗುವುದನ್ನು ಪ್ರತ್ಯೇಕವಾಗಿ ನಿಂತು ನೋಡಲು ಬಹು ಸ್ವಾರಸ್ಯವಾಗಿರುತ್ತದೆ ಅವಕಾಶ ಇರುವ ಅಧಿಕಾರಿಗಳೆಲ್ಲರೂ ರೈಲ ಜನರ ಆ ಸಾಹಸ ಪರಾಕ್ರಮವನ್ನು ಮೂಗಿನಮೇಲೆ ಕನ್ನಡಕವನ್ನಿಟ್ಟು ನೋಡುತ್ತಿರುತ್ತಾರೆ.

ಶೀನಪ್ಪನವರೂ ಆ ದಿನ ಅಲ್ಲಿಗೆ ಬಂದಿದ್ದರು. ಅಕಸ್ಮಾತ್ತಾಗಿ, ಪೂನಾ ರೈಲು ಕಾಲಕ್ಕೆ ಸರಿಯಾಗಿ ಆಗಮಿಸಿಬಿಟ್ಟರೆ ಏನು ಗತಿ, ಎಂದು ಹೆದರಿ, ಅವರು

ಚಂಚುವಿನ ಸಲಹೆಯಂತೆ, ಏಳು ಏಳುವರೆಗೇನೇ ಒಂದು ಕಂಬದ ಕೆಳಗಿನ ಖಾಲಿ ಜಾಗದಲ್ಲಿ ನಿಂತು ನಶ್ಯ ಸೇದುತ್ತಿದ್ದರು. ಪೂನಾ ರೈಲೂ ಬಂತು! ಆದರೆ, ಅದರೊಳಗಿನ ಅಪಾರ ಜನಸಂದಣಿಯವರೆಲ್ಲರೂ ತಮ್ಮ ತಲೆಗಳನ್ನು ಹೊರಕ್ಕೆ ತಳ್ಳಿ ಹಿಡಿದು, ತಾವು ಕಾಣಬಹುದಾದ ನಂಟರಿಷ್ಟರ ಮನಸ್ಸಂತೋಷಕ್ಕಾಗಿ, ಕಿವಿವರೆಗೂ ಹಲ್ಲು ಕಿರಿದು, ಮೂಗಿನ ತುದಿವರೆಗೂ ಕಣ್ಣುಗುಡ್ಡೆಗಳನ್ನು ಚಾಚಿ, ತಮ್ಮ ಬರವನ್ನು ಸೂಚಿಸಲು ಬಲಗೈಗಳನ್ನು ಬೀಸುತ್ತಿದ್ದುದರಿಂದ, ಆ ಕಂಬ ದಾಟಿ ಮುಂದು ಮುಂದಕ್ಕೆ ಹಾದುಹೋದ ನಾಗರಾಜ ನೀರಜರನ್ನು ಶೀನಪ್ಪನವರು ಗುರುತಿಸಲಿಲ್ಲ.

ನಾಗರಾಜನಿಗಂತೂ ಶೀನಪ್ಪನವರ ಆಗಮನದ ಸುದ್ದಿಯೇ ತಿಳಿಯದು. ಮೆಂಗಡೂರಲ್ಲಿ ತಂದೆ ಮನೆ ಇದ್ದರೂ, ತನಗಲ್ಲಿ ಪ್ರವೇಶ ದೊರಕದೆಂದೂ, ದೊರಕಿದರೂ ನೀರಜಳಿಗೆ ಅಲ್ಲಿ ನೆಮ್ಮದಿ ಸಿಗದೆಂದೂ ಅವನು ಅರಿತಿದ್ದ. ಅವನಿಗಿದ್ದದ್ದು ಅದೊಂದೇ ಆತಂಕ; ಮಹಾಬಲರಾಯರ ಮಗನಾಗಿ ಗೋಕುಲದ ಮುಂದಿನ ಒಡೆಯನಾಗಿ ಬೇರೊಂದು ಮನೆಯಲ್ಲಿ ವಾಸವಾಗಿರಬೇಕಲ್ಲಾ, ಊರಿನವರ ಬಾಯಿ ಕಟ್ಟುವ ಬಗೆ ಹೇಗೆ. ತನ್ನ ಮನೆ ಗುಟ್ಟು ತನ್ನಿಂದಲೇ ರಟ್ಟಾಗುವುದಲ್ಲ—ಎಂಬುದು! ಆದರೂ, 'ಶಂಖವಾದ್ಯ'ದಿಂದ ಹೊರಟ ಕರೆಯನ್ನು ಅವನು ಮನ್ನಿಸಲೇಬೇಕಾಯಿತು. ಇಳಿಬಾಳಿನಲ್ಲಾದರೂ ತಂದೆತಾಯಂದಿರಿಗೆ ಬುದ್ಧಿ ಬಂದು, ಒಂದು ತಲೆಮಾರಿಗೂ ಮತ್ತೊಂದು ತಲೆಮಾರಿಗೂ ಬೇಡವೆಂದರೂ ವ್ಯತ್ಯಾಸ ಬಂದೇಬರುತ್ತದೆ ಎಂದು ಅವರು ತಿಳಿದು, ಅದನ್ನು ಮಗಸೊಸೆ ಇವರಲ್ಲಿ ಕಂಡಾಗ ಸಹಾನುಭೂತಿಯಿಂದ ಮನ್ನಿಸುವರೆಂಬ ನಿರೀಕ್ಷಣೆಯೂ ಅವನಿಗಿತ್ತು. ಆದರೂ, ಇತರ ಪ್ರಯಾಣಿಕರು ಆಶಿಸಿದಂತೆ, ಅವನು ನಿಲ್ದಾಣದಲ್ಲಿ ಯಾವ ನಂಟರನ್ನೂ ಎದುರುನೋಡಲಿಲ್ಲ. 'ಶಂಖವಾದ್ಯ'ದ ಕಚೇರಿಯಿಂದ ಸೇವಕರು ಯಾರಾದರೂ ಬಂದಿರುವರೋ, ಏನೋ, ಎಂಬ ಶಂಕೆ ಮಾತ್ರ ಅವನ ಮೆದುಳನ್ನು ಕೆರೆಯುತ್ತಿತ್ತು. ಅದಕ್ಕಾಗಿ, ಅವನು ಪತ್ರಿಕಾಲಯದ ನೌಕರರಂತೆ ಕಂಡ ಒಂದೆರಡು ಬಡಮೋರೆಗಳನ್ನು ಸೂಕ್ಷ್ಮಿಸಿ ನೋಡಿದ; ನೀರಜ ಒಂದು, ಎರಡು, ಮೂರು, ಎಂದು ಗಂಟುಮೂಟೆಗಳನ್ನು ಎಣಿಸಿ ತನಿಖೆ ನಡೆಸುತ್ತಿದ್ದಳು.

"ನಾಗೂ" ಎಂಬ ಕೂಗಿನ ಅರ್ಧದಲ್ಲೇ ಅವನ ಬೆನ್ನಮೇಲೆ ಬಲವಾದ ಒಂದು ಗುದ್ದು ಬಿತ್ತು. ನೀರಜ ಗಾಬರಿಯಿಂದ ಕಣ್ಣರಳಿಸಿದಳು. ಪೋರ್ಟರುಗಳೂ ಕೂಡ ಅವಾಕ್ಕಾದರು. "ಭಾವ!" ಎಂದು ಹಿಗ್ಗುತ್ತ, ನಾಗರಾಜ ನಡುಬೆನ್ನನ್ನು ಉಜ್ಜಿಕೊಂಡ. "ಬೊಂಬಾಯಿ ವಾಸ ಹೆಣ್ಣು ಮಕ್ಕಳಿಗೆ ಚೆನ್ನಿಲ್ಲ, ಅಂತಾರೆ! ನಿಜ, ಕಣೋ, ಆ ಮಾತು! ಪಾಪ! ಹುಡುಗಿ ಹೇಗಾಗಿ ಬಿಟ್ಟಿದ್ದಾಳೆ!" ಎಂದು ನೀರಜಳಿಗೆ ಕೇಳಿಸುವಹಾಗೆ ಹೇಳಿದ್ದರಿಂದ ಭಾವನವರು ಅವಳ ವಿಶ್ವಾಸ ಗೌರವಗಳನ್ನು ಕೂಡಲೇ ಪಡೆದರು. "ನಿನ್ನ ಶಂಖವಾದ್ಯಕ್ಕೆ ನಾಲ್ಕು ದಿನ ಬಾಯಿ ಕಟ್ಟಿದೆ, ಮುಂದಿನ ತಿಂಗಳತನಕ ಭಯವಿಲ್ಲ. ಕೆಲಸಗಾರರ ಮುಷ್ಕರ ಪ್ರಾರಂಭವಾಗಿದೆ, ನಿನ್ನೆಯಿಂದ.... ನೀನು ಅದರ ಹವ್ಯಾಸ ತಲೆಗೆ ಹಚ್ಚಿಕೊಳ್ಳಬೇಡ.... ಬಾ, ನನ್ನ ಮನೆಗೆ! ಗಾಡಿಯವನನ್ನ ಆಗಲೇ ಗೊತ್ತುಮಾಡಿ ಹೊರಗಡೆ ನಿಲ್ಲಿಸಿದೇನೆ. ಬಸುರಿ ಹೆಂಗಸನ್ನ ಈ ಮೂವತ್ತು ಮೆಟ್ಟಿಲ ಸೇತುವೆ ಹತ್ತಿಸಿ ಇಳಿಸುವುದೆಂದರೆ, ನನ್ನ ಮನಸ್ಸಿಗೊಪ್ಪಿಗೆಯಿಲ್ಲ.... ಇತ್ತ ಕಡೆ ಇದೆ, ಗಾಡಿ!.... ಬಾ...." ಎಂದು ಹೇಳುತ್ತಲೇ, ಶೀನಪ್ಪ ಭಾರವಾದ ಚೀಲವೊಂದನ್ನು ತನ್ನ ಕೊಂಕುಳಿಗೇರಿಸಿದ!

ನಾಗರಾಜನ ಕಣ್ಣು ಕತ್ತಲೆ ಕಟ್ಟಿತು. "ಬೆಂಗಳೂರಿಗೆ ಬಂದರೂ ತಂಗಳೇ ಗತಿ" ಎಂಬ ಗಾದೆ ಅವನಿಗೆ ನೆನಪಾಯಿತು.... ಶಂಖವಾದ್ಯದ ಯಜಮಾನರು ವೀರ ತ್ಯಾಗಿ, ಧೀರ ದೇಶಾಭಿಮಾನಿ! ಆದರೆ, ಅಲ್ಲೂ ಮುಷ್ಕರ, ಎಂದು ತಿಳಿದಾಗ, ನಾಗರಾಜ ಭಾವನವರ ಬಾಲವನ್ನೇ ಹಿಡಿದು, ಅವರು ಗೊತ್ತುಮಾಡಿದ್ದ ಗಾಡಿಯಲ್ಲೇ ಕುಳಿತು, ಅವರ ಮನೆಗೇ ಪತ್ನೀ ಸಮೇತನಾಗಿ ಪ್ರವೇಶಮಾಡಿದ.

ಆದರೆ, ಶಂಖವಾದ್ಯದ ನೌಕರರ ಮುಷ್ಕರಕ್ಕೆ ಮಾಲೀಕರ ಕಡಾಟೋಪ ಚಿಪುಣತನಗಳು ಕಾರಣವಾಗಿರಲಿಲ್ಲ. ಮೊಳೆಜೋಡಿಸುವ ಮಹನೀಯರ ಪೈಕಿ ಒಬ್ಬನ ಕೈ ಶುದ್ಧವಾಗಿರಲಿಲ್ಲವಂತೆ; ಎಂಥ ಸಭ್ಯ ಮಾತನ್ನಾದರೂ ತಾನೇ ತಾನಾಗಿ ಅಸಭ್ಯಮಾಡಬಲ್ಲ ಕೈ ಅವನದು. ಕೇವಲ ಅಶ್ಲೀಲ ಸಾಹಿತ್ಯ ಸೃಷ್ಟಿಯಲ್ಲಿ ಅವನ ಅನೃತ ಹಸ್ತ ಆಸಕ್ತಿ ವಹಿಸಿ, ಶಂಖವಾದ್ಯವನ್ನು ನಿಶ್ಶಂಕೆಯಿಂದ ಹೆಂಗಸರು ಮಕ್ಕಳೆದುರು ಓದಬಾರದ ಹೊಲೆ ಹಾಳೆಯಾಗಿ ಮಾರ್ಪಡಿಸುತ್ತಿದ್ದನಂತೆ. ಪಾಪ! ಆತನದು ಏನೂ ತಪ್ಪಿಲ್ಲ. ಆತನ ತಾತ ಹಳ್ಳಿ ಕಡೆ

ಹರಿಕಥೆ ಮಾಡುತ್ತಿದ್ದರಂತೆ. ಆತನ ತಂದೆ ಪೋಲೀಸ್ ದಫೇದಾರನಾಗಿ ರಿಟೈರಾದನಂತೆ....ಪೇಪರನ್ನೋದಿ ಕಿಲಕಿಲನೆ ನಕ್ಕು ಆನಂದಿಸಿ ಗೆಳೆಯರಿಗೆಲ್ಲ ಓದಿ ತೋರಿಸಿ ಕಚಕುಳಿ ಇಟ್ಟು ಕುಣಿದಾಡಿದ ಸದ್ಗೃಹಸ್ಥರು, ಅಚ್ಚಿನ ತಪ್ಪಿನಿಂದ ಅಶ್ಲೀಲ ಹೆಚ್ಚುತ್ತಿದೆ, ಎಂಬ ಸಮಾಚಾರವನ್ನು ಶಂಖವಾದ್ಯದ ಕಚೇರಿಗೆ ತಿಳಿಸಲೇ ಇಲ್ಲ. ಏಕೆಂದರೆ, ಆ ರೀತಿ ಎಚ್ಚರಿಕೆ ಕೊಟ್ಟರೆ, ಎಲ್ಲಿ ಅಂಥ ಮಾತುಗಳು, ಅಂಥ ಕಟಿಹಾಸ್ಯ ಪ್ರಮೇಯಗಳು ನಿಂತುಹೋಗುವುವೋ, ಎಂಬ ಭಯ ಅವರಿಗೆ. ಒಬ್ಬರ ಬಾಯಿಂದ ಇನ್ನೊಬ್ಬರ ಕಿವಿಗೆ ಬಿದ್ದು, ಆ ಮೊಳೆ ಜೋಡಿಸುವವನ ಮಹಾಪರಾಧಗಳೆಲ್ಲ ಮನೆಮನೆಯ ಪಿಸುಮಾತಾಯಿತು. ಎಂದೋ ಒಂದು ದಿನ ಕೇಶಾದ್ರಿಪುರದ ಸನಾತನ ಧರ್ಮ ಸಂಘದ ಸ್ಥಾಪಕರಾದ ತಿಪ್ಪಯ್ಯನವರು ಅದರ ಒಂದು ಪ್ರತಿಯನ್ನು ಓದಿದರಂತೆ. ಆಗ, ಅವರ ಕಿವಿಗಳೆರಡೂ ಕೋಪದಿಂದ ಕಾವೇರಿ ಸುಟ್ಟ ಹಪ್ಪಳದಂತಾದುವಂತೆ. ಕೂಡಲೇ ಅವರು ಕಚೇರಿಗೆ ಬಂದು ತನಿಖೆ ನಡೆಯಿಸಿ ಶಂಖವಾದ್ಯದಲ್ಲಿ ಅಪಸ್ವರ ತೂರಿಸುತ್ತಿದ್ದ ಆ ನಿರ್ದೋಷಿಯನ್ನು ಮೆಟ್ಟಲಿಳಿಸಿದರಂತೆ. ಆಗ, ಉಳಿದ ಕೆಲಸಗಾರರೆಲ್ಲ ಸೇರಿ, ಶ್ಲೀಲಕ್ಕೂ ಅಶ್ಲೀಲಕ್ಕೂ ಅನೇಕ ವೇಳೆ ಒಂದೇ ಒಂದು ಕೊಂಬು, ಒಂದು ಗೀಟು, ಒಂದು ಗುಡಿಸು,—ಮಾತ್ರ ವ್ಯತ್ಯಾಸ ಇರುವಂತೆ ಕನ್ನಡ ಭಾಷೆಯನ್ನು ರಚಿಸಿದವರನ್ನು ಶಿಕ್ಷಿಸುವುದನ್ನು ಬಿಟ್ಟು, ಹತ್ತೇ ಬೆರಳುಗಳಿಂದ ಹತ್ತಾರು ಗೂಡುಗಳಿಂದ ಅಕ್ಷರ ಭಾಗಗಳನ್ನು ಆರಿಸಿ, ಅಣಿಮಾಡುವ ಗಲಿಬಿಲಿಯಲ್ಲೂ ಕರ್ಣಕುಠಾರವಾಗಿದ್ದ ಶಂಖವಾದ್ಯದ ಕಾಲಂಗಳಿಗೆ ಕಳೆಗೂಡಿಸುತ್ತಿದ್ದ ತಮ್ಮ ಸಂಗಡಿಗನನ್ನು ಸಂಕಟಕ್ಕೆ ಗುರಿಮಾಡಬಾರದು ಎಂದು ಅವರು ಕೂಗಾಡಿದರು. ಎಲ್ಲರೂ ಒಟ್ಟಿಗೆ ಮೆಟ್ಟಲಿಳಿದರಪ್ಪ, ಎಂದು ಶೀನಪ್ಪನವರು ಎಲೆ ಅಡಿಕೆ ಜಗಿಯುತ್ತ ವರದಿ ಒಪ್ಪಿಸಿದರು. "ಇದು ಮಜ್ದೂರ್ ರಾಜ್ಯ; ಕೂಲಿಗಾರರ....ಅದೆಂಥಾದ್ದು....ಯುಗ!" ಎಂದು ಹೇಳಿ, ಅವರು ಕಿಟಕಿಯಾಚೆಗೆ ಉಗುಳಿದರು. "ನೋಡು, ನಾಗರಾಜ! ನೀನು ಕೊಂಚವೂ ಚಿಂತಿಸಬೇಕಾಗಿಲ್ಲ....ದೇವರು ಯಾವುದೋ ಬೇರೆ ದಾರಿ ತೋರಿಸುತ್ತಾನೆ. ಕೊನೆಯ ಪಕ್ಷ....ರೇಡಿಯೋ ರಿಪೇರಿ ಮಾಡಲಾರೆಯಾ, ನೀನು! ನೂರಾರು ಜನ ವೆಂಗಡೂರಲ್ಲಿ ಇವತ್ತಿಗೂ ಕೆಟ್ಟ ರೇಡಿಯೋಗಳನ್ನು ಕೆಡಿಸಿ ಕಾಸು ಸಂಪಾದಿಸಿ ಬದುಕುತ್ತಿದಾರೆ...." ಎಂದು ಅವರು ಹುರಿದುಂಬಿಸಿದರು. ಶೀನಪ್ಪನವರು

"ಕೊನೆಯ ಪಕ್ಷ...." ಎಂದು ಪ್ರಾರಂಭಿಸಿದಾಗ, ಎಲ್ಲಿ ಇನ್‌ಷೂರೆನ್ಸ್ ಕಂಪನಿ ಏಜಂಟ್ ಕೆಲಸ ಎಂದು ಒದರುತ್ತಾರೋ ಎಂಬ ಭೀತಿ ನಾಗರಾಜನಿಗೆ ಅಂಕುರಿಸಿತ್ತು. ಆದರೆ, ಸದ್ಯಃ, ಅವರು ಆ ಕಸಬಿನ ಹೆಸರು ಹೇಳಿ ನಾಗರಾಜನನ್ನು ನೋಯಿಸಲಿಲ್ಲ. ನೂರಾರು ರೂಪಾಯಿ ತೆತ್ತು ಮನೆಗೆ ತಂದು, ಅದರೊಳಗಿಂದ ಗಗನ ಪಿಶಾಚಿಗಳು ಊಳಿಟ್ಟಾಗ ಹೆದರಿ ರಿಪೇರಿ ಮಾಡಿಸುವ ವಿಜ್ಞಾನ ರಹಿತ ಹಣವಂತರನ್ನು ಬಗೆ ಬಗೆಯ ರೀತಿಯಲ್ಲಿ ಬಗಿಯುವುದನ್ನೇ ಅವರು ನಾಗರಾಜನಿಗೆ ಸೂಚಿಸಿದರು.

ಭಾವನವರ ಸಲಹೆ, ಚಂಚು ಒತ್ತಾಯ, ಇವೆರಡರ ಫಲವಾಗಿ ನೀರಜ ತವರುಮನೆಗೆ ಹೊರಡುವ ಕಾರ್ಯಕ್ರಮ ನೆರವೇರಲಿಲ್ಲ. ರಾಷ್ಟ್ರೀಯ ಚಿಕಿತ್ಸಾಲಯದಲ್ಲೇ ವೀರ ಕನ್ನಡಿಗನಾದ ನಾಗರಾಜನ ಮಗು ಜನನವಾಗಬೇಕೆಂದು ಚಂಚು ಹೇಳಿದಾಗ ಅವನೂ ಹೂ ಎಂದ. ದೊಡ್ಡ ಮಗಳೂರಿಂದಲೂ, ನಿಮ್ಮ ಯೋಚನೆಗೆ ನಮ್ಮ ಒಪ್ಪಿಗೆ, ಎಂಬ ಪತ್ರ ಬಂತು. ಏಕೆಂದರೆ, ಅಲ್ಲಿ ಹೊಸದಾಗಿ ಕಟ್ಟಿ ಮಂತ್ರಿಗಳೇ ತೆರೆದಿದ್ದ ಹೆರಿಗೆ ಆಸ್ಪತ್ರೆಯಲ್ಲಿ ಮೊದಲ ಮೂರು ಪ್ರಸವಗಳೂ ಸ್ತ್ರೀಜನನದಲ್ಲೇ ಮುಕ್ತಾಯವಾಗಿತ್ತು....

* * * *

ಮರುದಿನ ಬೆಳಗ್ಗೆ ನಾಗರಾಜನೂ ನೀರಜಳೂ ಮಹಾಬಲರಾಯರ ಮನೆಗೆ ಹೊರಟರು. ಶೀನಪ್ಪನವರೇ ಜಟಕಾ ಸ್ಟ್ಯಾಂಡಿಗೆ ಹೋದರು. ಅನೇಕ ಗಾಡಿಗಳಿಗೆ ಕಟ್ಟಿದ್ದ ಕುದುರೆಗಳು ಎಷ್ಟು ಪುರಾತನವೇದರೆ, ಅವುಗಳ ಗೊರಸು ಸೀಳಾಗಿಯೇ ಇದ್ದುವು! ಹೊಸದಾಗಿ ರಬ್ಬರ್ ಟೈರ್ ಹಾಕಿಸಿದ್ದ, ಸಾಧು ಕುದುರೆಯನ್ನೇ ಕಟ್ಟಿರುವ, ಜಗಳಗಂಟಿಗನಲ್ಲದ ಸಾರಥಿಯಿರುವ, ಗಾಡಿ ಇದ್ದದ್ದೇ ಒಂದು. ಅದನ್ನು ಆರಿಸಿ ಒಳಗೆ ಹೆಚ್ಚು ಹುಲ್ಲನ್ನು ಹರಡಿಸಿ, ಜಮಖಾನೆ ಕೊಡವಿಸಿ, ಶೀನಪ್ಪನವರು ನಿಧಾನವಾಗಿ ಮನೆಬಾಗಿಲಿಗೆ ತಂದು ನಿಲ್ಲಿಸಿದರು. "ನೋಡು! ನಿಮ್ಮಪ್ಪ ಈಗ ರಿಟೈರು! ಅಂದರೆ, ಅವನ ಗುಣ ಶೀಲ ನಡತೆ ಎಲ್ಲ ಬದಲಾಗಿ ಬಿಟ್ಟಿದೆ. ಅದಕ್ಕೆ ತಕ್ಕಹಾಗೆ, ಹಾಕು, ನಿನ್ನ ಗಾಳಾನ! ನಿಮ್ಮಮ್ಮನನ್ನು ಕಂಡ ತಕ್ಷಣವೇ ನಿನ್ನ ಹೆಂಡತಿ ಅವಳಿಗೆ "ತಪ್ಪಾಯಿತು" ಎನ್ನುತ್ತ ಒಂದು ದೊಡ್ಡ ನಮಸ್ಕಾರ ಹಾಕಿಬಿಡಲಿ....ಅವಳೂ ಈಗ

ಹಿಂದಿನಷ್ಟು ರೇಗುವಂತೆ ತೋರಲಿಲ್ಲ" ಎಂದು ಶೀನಪ್ಪನವರು ಬುದ್ಧಿ ಹೇಳಿ ಕಳುಹಿಸಿದರು. "ಚುಚು ಕೂಡ, ಆಸ್ಪತ್ರೆಗೆ ಹೋಗದೆ, ಅಲ್ಲೇ ಇರುತ್ತೇನೆ, ಸಮಯ ಸಂದರ್ಭ ನೋಡಿಕೊಂಡು, ಒಂದೆರಡು ಒಳ್ಳೆ ಮಾತು ಹಾಕುತ್ತೇನೆ ಎಂದು ಹೇಳಿದ್ದಾಳೆ" ಎಂದರು. ಚಾವಟಿ ಸದ್ದಿಗೆ, ಚಕ್ರಗಳು ಉರುಳಲಾರಂಭಿಸಿದುವು.

# ಗೋಡೆ ಮಗ್ಗುಲು

ಬೆಳಗ್ಗೆ ಕಣ್ಣು ತೆರೆದ ಕೂಡಲೇ, ಮಹಾಬಲರಾಯರ ದೃಷ್ಟಿ ತಮ್ಮ ಸ್ವಂತ ಹೊಟ್ಟೆಯಮೇಲೆ ಬಿತ್ತು. ಒಂಟೆ ಬೆನ್ನಿನ ಗೂನಿನಂತೆ ಅದು ಬುದ್ಬುದಾಕಾರವನ್ನು ಅನೇಕ ವರ್ಷಗಳಿಂದಲೂ ತಾಳಿತ್ತಾದರೂ, ರಾಯರಿಗೆ ಆ ಭಯಂಕರ ಸತ್ಯ ಅಂದೇ ಚನ್ನಾಗಿ ಗೋಚರವಾದದ್ದು. ರಿಟೈರಾದ ಮೇಲಾದರೂ, ಪ್ರಯತ್ನಪಟ್ಟು ಅದನ್ನು ಕರಗಿಸಿ, ತಮ್ಮಿಂದ ಭೂಮಿತಾಯಿ ಗಾಗುತ್ತಿದ್ದ ಭಾರವನ್ನು ಕಡಮೆಮಾಡಬೇಕೆಂದು ಅವರು ಮಲಗಿಕೊಂಡೇ ತೀರ್ಮಾನಿಸಿದರು. ಕೃಷ್ಣನ ಹೊಟ್ಟೆಯ ಸುತ್ತಳತೆಯನ್ನು ಅವನ ಸಾಕು ತಾಯಿ ಸಕಾಲದಲ್ಲಿ ಹಗ್ಗ ಬಿಗಿದು, ಅದು ಮುಂದೆ ಬೆಳೆಯದೆ ತಡೆದಳೆಂದು ಅವರು ದಾಮೋದರೋಪಾಖ್ಯಾನದಲ್ಲಿ, ಓದಿದ್ದರು. ಆದರೆ, ಮರವಾದಮೇಲೆ ಗಿಡವನ್ನು ಬಗ್ಗಿಸುವ ಯೋಚನೆಯಿಂದ ಫಲವೇನು? ತತ್ಕಾಲದ ಉಬ್ಬರ ವನ್ನು ಅಬ್ಬರವಿಲ್ಲದೆ ಇಳಿಸುವುದೇ ಧರ್ಮ. ಔಷಧಿಗಳಿಂದ ಡಾಕ್ಟರುಗಳೂ ಮದ್ದಿನ ಕಂಪನಿಗರೂ ಪ್ರವರ್ಧಮಾನಕ್ಕೆ ಬರುತ್ತಾರೆಯೇ ಹೊರತು, ಹೊಟ್ಟೆ ಗೇನೂ ಧಕ್ಕೆ ತಗುಲಲಾರದು. ಕೊಬ್ಬು ಕರಗಿಸುವಂಥ ದ್ರಾವಕಗಳೂ ಗುಳಿಗೆಗಳೂ ಅನೇಕ ಇತ್ತಾದರೂ, ಸಾಮಾನ್ಯವಾಗಿ, ಎಲ್ಲ ಜಾಹಿರಾತು ಗಳಲ್ಲೂ, ಅವುಗಳನ್ನು ಸಿನಿಮ ತಾರೆಯರೂ ವೃದ್ಧನಾರಿಯರೂ ಉಪ ಯೋಗಿಸಿ ಹಿಡಿನಡುವಿನರಾದಂತೆ ಮಾತ್ರ ಪ್ರಕಟವಾಗಿತ್ತು! ಅವೆರಡು ಪಂಗ ಡಕ್ಕೂ ಸೇರದ ರಾಯರ ತೂಕವನ್ನಿಳಿಸಲು ಅವು ಪ್ರಯೋಜನಕಾರಿಯಾಗ ಲಾರದೆಂದೇ ಅವರು ನಿಶ್ಚಯಿಸಿದರು. ವೃಥಾ ಹಣವನ್ನು ಖರ್ಚುಮಾಡದೆ, ಅವ ರಿವರ ಕೈಕಾಯದೆ ಸ್ವಪ್ರಯತ್ನದಿಂದಲೇ ಸೊಂಟವನ್ನು ಕರಗಿಸಲು ರಾಯರು ಯೋಗಾಸನ ಪದ್ಧತಿಯನ್ನೇ ಅವಲಂಬಿಸಲು ಸಂಕಲ್ಪಮಾಡಿಕೊಂಡರು. ಜವಾಹರ ಲಾಲರವರೂ ಕೂಡ ತಮ್ಮ ವಿವಿಧ ಕಾರ್ಯಕಲಾಪಗಳ ನಡುವೆ, ಶೆಪ್ಪಿಗೆ ಐದು ನಿಮಿಷ ವಿರಾಮ ಕಲ್ಪಿಸಿಕೊಂಡು, ನಾಲ್ಕಾರು ಆಸನಗಳನ್ನು ಹಾಕಿ, ತನ್ಮೂಲಕ ತಮ್ಮ ತನುಮನಗಳಿಗೆ ಲವಲವಿಕೆ ತುಂಬುವರೆಂದು ಯೋಗಪ್ರಚಾರಕರೊಬ್ಬರು ಉಪನ್ಯಾಸಕೊಟ್ಟಿದ್ದರು; ರಾಯರ ಕಿವಿಗೂ

ಬೀಳಿಸಿದ್ದರು. ಯೋಗಾಸನದಲ್ಲಿ ಅವರಿಗಿದ್ದ ಹಳೆಯ ಪ್ರೇಮ ಅದರಿಂದ ಚಿಗುರಿತ್ತು.

"ಯದ ಹರೇವ ವಿರಜೇತ್, ತದ ಹರೇವ ಪ್ರವ್ರಜೇತ್" ಎಂಬಂತೆ, ಯೋಗಾಸನವನ್ನು ಆಗಲೇ ಹಾಕೇಬಿಡೋಣವೆಂದು ರಾಯರು ಮಂಚದಿಂದಿಳಿದರು. "ತದೇವ ಲಗ್ನಂ ಉದರಂ ತಥ್ಯೈವ!" ಗೋಡೆ ಮಗ್ಗುಲಿಗೆ ಹೋಗಿ, ಪಂಚೆ ಬಿಗಿದು, ಕೈಕಾಲುಗಳನ್ನು ಮಡಿಸಿ, ನೆಲಕ್ಕೆ ಊರಿದರು. ಸೈದಾಪೇಟೆಯಲ್ಲಿದ್ದಾಗ, ಅಲ್ಲೊಂದು ಆಶ್ರಮದ ಸ್ವಾಮಿಗಳೊಬ್ಬರು ಕೆಲವು ಎಲ್.ಟಿ. ವಿದ್ಯಾರ್ಥಿಗಳಿಗೆ ಪ್ರಾಚೀನ ಭಾರತ ವ್ಯಾಯಾಮ ಶಾಸ್ತ್ರದಲ್ಲಿ ಮಮತೆಯನ್ನುಂಟುಮಾಡಲು, ಕೊಂಚ ಯೋಗಾಸನ ಕಲಿಸಿದ್ದರು. ಒಂದೆರಡು ವಾರ, ಮಹಾಬಲರಾಯರೂ ಅಲ್ಲಿಗೆ ಹೋಗಿ, ಅಲ್ಲಿಯ ಗೋಡೆ ಮಗ್ಗುಲಲ್ಲಿ, ತಲೆ ಕೆಳಗಾಗಿ ಮೊಳಕೈ ಮೇಲೆ ಒಂದೂವರೆ ನಿಮಿಷ ನಿಂತಿದ್ದುಂಟು. ಆ ಆಸನಬಲದಿಂದಲೇ ರಾಯರಿಗೆ ಈಗ ತಮ್ಮ ಸ್ವಂತ ಮನೆ ಗೋಡೆಯ ಮಗ್ಗುಲಲ್ಲೂ ಕೈ ಊರಲು ಧೈರ್ಯ ಉಂಟಾದದ್ದು. ಎಂಟು ಹತ್ತು ಬಾರಿ ತಮ್ಮ ಮನೋಬಲವನ್ನೆಲ್ಲ ವೆಚ್ಚಮಾಡಿ, ಮುದುಕಿಂದ ಮೂರು ಮೊಳದಾಚೆ ಇದ್ದ ಕಾಲುಗಳನ್ನು ಮೇಲೆತ್ತಲು ಹವಣಿಸಿದರೂ, ಅವು ರಾಯರ ಮಾತನ್ನು ಕೇಳಲಿಲ್ಲ. ಕಡೆಗೆ, ಸೈದಾಪೇಟೆಯ ಆಶ್ರಮದ ಚಿತ್ರವನ್ನು ಮನಸ್ಸಿಗೆ ತಂದುಕೊಂಡು. ಆ ಸ್ವಾಮಿಗಳ ಗಡ್ಡವನ್ನೇ ಧ್ಯಾನಿಸಿ. ಅವರ ಗುರುಗಳ ಅನುಗ್ರಹವನ್ನು ಬೇಡಿ, ಒಮ್ಮೆ ಮಾಡಿದ್ದನ್ನು ಮತ್ತೊಮ್ಮೆ ಮಾಡಲಾರೆನೇ ಎಂದು ಪ್ರಶ್ನಿಸುತ್ತಾ, ರಾಯರು, ಹುಂ ಎಂದು ಉಸಿರುಕಟ್ಟಿ ಕಾಲುಗಳೆರಡನ್ನೂ ಮೇಲಕ್ಕೆತ್ತಿಯೇ ಬಿಟ್ಟರು. ಅವು ನೆಲದಿಂದೆದ್ದು, ನೆಟ್ಟನೆ ಗೋಡೆಗೆ ಒರಗಿ ನಿಟೆದುಕೊಂಡುವು. ರಾಯರ ಶೀರ್ಷಾಸನವು ಸಂಪೂರ್ಣವಾಗಿ 'ನೆರವೇರಿತು!' ಮೊದಲನೆಯ ಆಸನವನ್ನು ಮುದಿ ವಯಸ್ಸಿನಲ್ಲಿ ಹಾಕಲು ಸಾಧ್ಯವಾದದ್ದರಲ್ಲಿ ರಾಯರಿಗೆ ಪರಮಾನಂದವಾಯಿತು.

ಆದರೆ, ನೆರ ವಿಳಿಯ' ಬೇಕಲ್ಲ! ಏಕೆಂದರೆ, ಅಷ್ಟರೊಳಗೆ, ಬಾಗಿಲ ಹೊರಗಡೆ, ಚಂಚು ಸರಸು ಇಬ್ಬರೂ ಗಟ್ಟಿಯಾಗಿ ಚರ್ಚೆಮಾಡುತ್ತಿದ್ದದ್ದು ಕೇಳಿಸಿತು. 'ಕೋಲು? ಕೋಲೆಲ್ಲಿ? ಆ ಕೋಲೆಲ್ಲಿ? ಅದನ್ನ ನೋಡು, ಮೊದಲು' ಎಂದು ಸರಸು ಕೂಗಿದಳು. ರಾಯರಿಗೆ ದಿಗಿಲು ಹತ್ತಿತು. "ಕೋಲಿನ

ಮಾತೇಕೆ ಇವಳಿಗೆ ಈಗ?" ಯಾವುದೂ ಬಗೆಹರಿಯಲಿಲ್ಲ. ಮಂಡಿಗಳನ್ನು ಮಡಿಸಿ, ಗೋಡೆಯ ಆಶ್ರಯದಿಂದ ಕೆಳಮೈ(ಪದ್ಮದ, ಮೇಲುಮೈ)ಯನ್ನು ಬೇರ್ಪಡಿಸಿ, ಬಾಗಿಸಿ, ಕೆಳಕ್ಕೆ ತಂದು, ನೆಲದಮೇಲೆ ಯಥಾವಿಧಿ ಕೈಕಾಲುಗಳನ್ನೂರಬೇಕು; ಅದೇ ಯೋಗಶಾಸ್ತ್ರ; ಇಳಿಯುವ ಬಗೆ; ಅದೇ ಸೈದಾಪೇಟೆ ಉಪದೇಶ, ಪದ್ಧತಿ....ಗೊತ್ತು. ಆದರೆ, ಎಷ್ಟು ಶ್ರಮಿಸಿದರೂ, ಕಾಲುಗಳು ಗೋಡೆಯ ಆಸರೆಯನ್ನು ತ್ಯಜಿಸಲೇ ಇಲ್ಲ. ಪ್ರಾಣಭೀತಿಯಿಂದ ಗ್ರಸ್ತವಾಗಿ ಅವು ಭಿತ್ತಿಯನ್ನು ಕಚ್ಚಿ ಹಿಡಿದಿದ್ದುವು. ತಲೆ ಬಾ ಎಂದರೂ ಕಾಲು ಒಲ್ಲೆ ಎನ್ನುತ್ತಿತ್ತು.

"ಕೋಲು ಇಲ್ಲಿದೆ" ಎಂದು ಚುಚು ಉತ್ತರಕೊಟ್ಟಳು. ರಾಯರು ಹೆದರಿ ಬೆವರಿದರು. "ಹಾಗಾದರೆ, ಅವರಿನ್ನೂ ಮಲಗಿದಾರೆ; ವಾಕಿಂಗ್ ಹೋಗಿಲ್ಲ ....ಇವತ್ತೇಕೆ ಇಷ್ಟು ತಡ, ಏಳೋದಕ್ಕೆ? ಮೈಯಲ್ಲಿ ಹುಷಾರಿಲ್ಲವೋ ಏನೊ? ನಿನ್ನೆ ರಾತ್ರಿ ಆ ಹಾಳು ಎಣ್ಣೆಗಾಯಿಯನ್ನು ಒಂದು ಪಂಚೇರು ಹೊಡೆದುಬಿಟ್ಟಿದಾರೆ, ಎರಡು ಚಮಚ ತುಪ್ಪ ಹೆಚ್ಚು ಸೇರಿಸಿಕೊಂಡು. ದೊಡ್ಡ ಚಮಚ!" ಎಂದು ಹೇಳುತ್ತ, ಸರಸು ಕೋಣೆ ಬಾಗಿಲ ಕಡೆ ಧಡಧಡನೆ ಬರುತ್ತಿದ್ದದ್ದು ರಾಯರ ತಲೆಕೆಳಗಿನ ಮಿದುಳಿಗೆ, ಅಂಥ ವಿಪರೀತ ಒತ್ತಡಕ್ಕೆ ಸಿಕ್ಕಿ ನರಳುತ್ತಿರುವಾಗಲೂ, ವೇದ್ಯವಾಯಿತು. ಹೊಟ್ಟೆಭಾರದಿಂದ ಎದೆಗೆ ನೋವು; ಅವೆರಡರ ಸಂಕಟದಿಂದ, ಕತ್ತು ನೋವು; ಕತ್ತಿನ ಬುಡದ ತಲೆಯೆಲ್ಲ ಸಿಡಿತ; ತಲೆಯೊಳಗಣ ಕಿವಿಯಲ್ಲಿ ಭೂಂ ಎಂಬ ಒಂದು ರೀತಿಯ ವಿಲಕ್ಷಣ ಶಬ್ದ, ಇವೆಲ್ಲದರಿಂದಾಗಿ, ರಾಯರು ಕೈಲಾಸದಡಿಯ ರಾವಣನಂತೆ, ತಮ್ಮ ಕಳೇಬರದ ಭಾರಕ್ಕೆ ತಾವೇ ಪರಿತಪಿಸುತ್ತಿದ್ದರು!

ರಕ್ತನಾಳಗಳ ಓಡಾಟವೆಲ್ಲ ಅದಲುಬದಲಾದ್ದರಿಂದಲೋ ಏನೋ, ರಾಯರ ಕಣ್ಣುಗಳಲ್ಲಿ ಕಣ್ಣೀರು ತುಂಬಿ, ಅವರ ದೃಷ್ಟಿಗೆ ಕೆಂಪಡರಿ, ಮಂಕಾಯಿತು. ಆದರೆ, ಆ ಅರೆಕತ್ತಲಲ್ಲೂ, ಅವರಿಗೆ, ಹೆಜ್ಜೆಯ ಮೇಲೆ, ಅವಸರದ ಹೆಜ್ಜೆಯನ್ನಿಕ್ಕುತ್ತ ತಮ್ಮ ರೂಮಿನೊಳಕ್ಕೆ ಬರುತ್ತಿದ್ದ ಕುಳ್ಳು ಸರಸುವಿನ ಪಾದಗಳು ಕಾಣಿಸಿದುವು. ರಾಯರು ನಡುಗಿದರು. ಹೇಗಾದರೂ, ಮಾಡಿ, ತಮ್ಮ ಕಾಲಿನಮೇಲೆ ತಾವು ನಿಲ್ಲಬೇಕೆಂದು ಹಾತೊರೆದರು. ಆದರೆ, ಗೋಡೆಯನ್ನಗಲಿದ ಕೂಡಲೇ, ಇಡೀ ದೇಹವೇ ಎಲ್ಲಿ ಭೂಮಿಯಿಂದ ಆಕರ್ಷಿತವಾಗಿ,

ಧೊಪ್ಪನೆ ಬಿದ್ದು ಚೂರಾಗುವುದೋ ಎಂಬ ಭಯದಿಂದ, ಅವರ ಸುಗ್ರೀವಾಜ್ಞೆಯನ್ನು 'ಕಾಲು'ಭಾಗ ಕೂಡ ಮನ್ನಿಸಲಿಲ್ಲ.

ಸರಸು ಒಳಗೆ ಬಂದೇಬಿಟ್ಟಳು! ರಾಯರ ದೃಷ್ಟಿಯೋ ಗೋಡೆ ಅಂಚಿನಲ್ಲಿ ಅವಳಿಂದೂ ಕಾಣದ ನಿಲುವಿನಲ್ಲಿ ನೆಟ್ಟುಕೊಂಡಿದೆ! ದೇವರ ದಯೆಯಿಂದ, ಸರಸು ಸರಕ್ಕನೆ ಮಂಚದಬಳಿ ಬಡಿದಳು. ಅಲ್ಲಿ ತನ್ನ ಗಂಡ ಇಲ್ಲದಿರುವುದನ್ನು ಕಂಡು ಏನು ಗಂಡಾಂತರ ಬಂದೆರಗಿತೋ, ಎಂದು ಅವಳು ಚೀರಿದಳು. ಅವಳ ರೋದನ ಕೇಳುತ್ತಲೂ,ಮಹಾಬಲರಾಯರಿಗೆ ಬಹು ಸಂಕಟವಾಯಿತು. 'ಇಲ್ಲಿದೇನೆ, ಕಣೆ' ಎಂದು ತಮ್ಮ ಅರಿವಿಲ್ಲದೆಯೇ ಹೇಳಿದರು. ಆದರೆ, ಗಂಟಲ ಮೇಲೆ ಇಡೀ ದೇಹ ಕುಸಿದು ಕೂತಿದ್ದರಿಂದ, ಅವರ ಧ್ವನಿಯ ತರಂಗಗಳು ಒಂದು ಗೇಣಿನಷ್ಟು ದೂರ ಕೂಡ ಚಿಮ್ಮಲಿಲ್ಲ. ಸರಸು ಅವರ ಕಡೆ ತಿರುಗದೆ, "ಚಂಚೂ....ಚಂಚೂ!" ಎಂದು ಕೂಗುತ್ತ ಹೊರಕ್ಕೆ ಹಾರಿದಳು.. ಮತ್ತೊಮ್ಮೆ ಅವಳು ಬರುವುದರೊಳಗೆ ಪೂರ್ವೇತಿಪೂರ್ವಃ, ಪಾದಗಳಮೇಲೆ ನಿಂತೇಬಿಡಬೇಕೆಂದು ರಾಯರು ತಮಗೆ ತಾವೇ ಹೇಳಿಕೊಂಡರು....ಆದರೆ ?

ಐವತ್ತೈದನೆಯ ವಯಸ್ಸಿನಲ್ಲಿ, ವೃದ್ಧಾಪ್ಯ ಸಿದ್ಧವಾದಮೇಲೆ, ಹಠಾತ್ತನೆ ಸೈದಾಪೇಟೆ ಹಠಯೋಗಕ್ಕೆ ಹೊರಡಬಾರದಾಗಿತ್ತೆಂದು ರಾಯರು ಕಿರುನಾಲಗೆಯಿಂದ ಕೊರಗಿದರು. ಪೆನ್‌ಷನ್ ಪಡೆದವರನೇಕರಿಗೆ ಚಿಂತೆ ಹೆಚ್ಚಿ, ರಕ್ತದ ಒತ್ತಡದಿಂದ, ತಲೆಬುರುಡೆಯೊಳಗಿನ ನರಗಳು ಸಿಡಿಯುತ್ತವೆಂದು ಅವರು ಕೇಳಿದ್ದರು. ಮೊದಲ ಆಸನಕ್ಕೇನೆ ಇಷ್ಟು ಹಿಂಸೆಯಾದರೆ, ಉಳಿದವುಗಳನ್ನು ಹಾಕಲು ಉದ್ಯುಕ್ತನಾಗಲೇ ಕೂಡದೆಂದು ಶಪಥಮಾಡಿದರು. ಏಕೆ, ಈ ಆಸನವನ್ನೇ ಮತ್ತೊಮ್ಮೆ ಅನುಸರಿಸುವ ಆಸೆಯೂ ಭರವಸೆಯೂ ಅವರಿಗಿರಲಿಲ್ಲ. ಹೇಗಾದರೂ ಮಾಡಿ, ಧೊಪ್ಪನೆ ಕೆಳಗೆ ಬಿದ್ದು ಹೊಟ್ಟೆ ಒಡೆದರೂ ಚಿಂತೆ ಇಲ್ಲ, ಹಾಳು ಕಾಲನ್ನು ಬಗ್ಗಿಸಿ ಗೋಡೆಯಿಂದೀಚೆಗೆ ಎಳೆದೇಬಿಡೋಣವೇ ಎನ್ನಿಸಿತು....ಆದರೆ,....

ಆಗ, ಚಂಚು ಸರಸು ಇಬ್ಬರೂ ಒಳಕ್ಕೆ ಬಂದು, ಅವರನ್ನು ಕಂಡೇಬಿಟ್ಟರು! "ಹಾಂ! ಹಾಂ!" ಎಂದು ಅಂಗಾಲಲ್ಲಾಡಿಸುತ್ತಾ ಮುಲುಗುತ್ತಿದ್ದ ರಾಯರನ್ನು ನೋಡುತ್ತಲೂ, ಸರಸು 'ಅಯ್ಯೋ' ಎಂದು ಅರಚಿದಳು. ಯಾವುದೋ ಒಂದು ಪಿಶಾಚಿ ಅವರನ್ನು ಮೆಟ್ಟಿಕೊಂಡು, ಹಾಸಿಗೆಯಲ್ಲಿ

ಹಾಯಾಗಿ ಮಲಗಿದ್ದವರನ್ನು ಎತ್ತಿ ಮಗುಚಿ ನಿಲ್ಲಿಸಿಬಿಟ್ಟಿದೆ ಎಂದು ಅವಳು ಊಹಿಸಿದಳು. 'ವೆಂಕಟರಮಣಾ! ನನಗೆ ಮಾಂಗಲ್ಯದಾನಮಾಡು! ಈ ಪಿಶಾಚಿಯನ್ನೋಡಿಸು!' ಎಂದು ಅವಳು ಕೈಮುಗಿದಳು. ರಾಯರು, "ಸಂಕಟ! ಸಂಕಟ!" ಎಂದು ಪಿಸುಗುಟ್ಟಿದ್ದರು. ಆದರೆ 'ವೆಂಕಟರಮಣಾ,' ಎಂಬ ದನಿಯಲ್ಲಿ ಅದು ಮುಚ್ಚಿಹೋಗಿತ್ತು.

ಚಂಚು, ಬುದ್ಧಿವಂತಳು! ಆದರೂ, ಅವಳಿಗೂ ರಾಯರ ನಿಲುವಿನ ಗುಟ್ಟು ಗೊತ್ತಾಗಲಿಲ್ಲ. ಅವರೇಕೆ ಹೀಗಾದರು, ಎಂಬ ಸಮಸ್ಯೆಯ ಚರ್ಚೆಗೆ ಇದು ಸಮಯವಲ್ಲ, ಎಂಬುದು ಮಾತ್ರ ಅವಳಿಗೆ ಗೋಚರವಾಯಿತು.. ಕೂಡಲೇ, ಅವರನ್ನು ತಿರುಪತಿ ವೆಂಕಟರಮಣನಂತೆ ಎರಡು ಕಾಲಮೇಲೂ, ನಿಲ್ಲಿಸದೆ ಹೋದರೆ, ಪೆನ್‌ಷನ್ ಸುಖ ಮುಗಿದಹಾಗೆಯೇ, ಎಂದು ಅವಳ ವೈದ್ಯಬುದ್ಧಿ ಅವಳಿಗೆ ಹೇಳಿತು. ನೆಲದಮೇಲೆ ಕೂತು ಬಗ್ಗಿ, "ಭಾವಾ! ಕಾಲು ಕೆಳಕ್ಕೆ ತನ್ನಿ!" ಎಂದು ಅವಳು ರಾಯರ ಕಿವಿಯಲ್ಲಿ ಗಟ್ಟಿಯಾಗಿ ಹೇಳಿದಳು. "ಆಗೋದಿಲ್ಲ, ಆಗುತ್ತಾ ಇಲ್ಲ" ಎಂದು ರಾಯರು ತಲೆ ಅಲ್ಲಾಡಿ ........ಅಲ್ಲ, ತಲೆ ಅಲ್ಲಾಡಿಸಿಲ್ಲ, ತಲೆ ಅಲ್ಲಾಡಿಸುವುದು ಹೇಗೆ?....ಕಣ್ಣು ಗುಡ್ಡೆಗಳನ್ನಾಡಿಸಿದರು.

ಪಿಶಾಚಿಗಿಶಾಚಿಗಳಲ್ಲಿ ಚಂಚುವಿಗೆ ನಂಬಿಕೆ ಕಡಮೆ. ಅವುಗಳಿಂದ ಪೀಡಿತರೆಂದು ದೇವಸ್ಥಾನಗಳಿಗೂ ಗೋರಿಗಳಿಗೂ ಪುಣ್ಯತೀರ್ಥಗಳಿಗೂ ಬರುವ ಸಾವಿರಾರು ಜನರಿಗೆ ನಿಜವಾಗಿಯೂ ಯಾವುದೋ ಮನೋರೋಗ ಹಿಡಿದಿದೆ ಅಷ್ಟೆ, ಎಂಬ ಆಧುನಿಕ ಮನಶ್ಶಾಸ್ತ್ರ ತತ್ವವನ್ನು ಅವಳು ಬಲ್ಲಳು. ಇದ್ದಕ್ಕಿದ್ದಂತೆ, ಆಫೀಸ್ ಕೆಲಸಕಾರ್ಯಗಳೂ ಮೋಟಾರ್ ಪ್ರಯಾಣವೂ ಅಧಿಕಾರದರ್ಪವೂ ನಾರಣಪ್ಪನ ನಮಸ್ಕಾರವೂ ನಿಂತುಹೋದದ್ದರಿಂದ ಭಾವ ನವರಿಗೆ ಹುಚ್ಚು ಹಿಡಿದು, ಅವರ ದೃಷ್ಟಿಕೋಣವೇ ವಿಪರೀತವಾಗಿರಬೇಕೆಂದು ಅವಳು ಅರಿತಳು. ಅಕ್ಕನವರು ಮಾಡುತ್ತಿದ್ದ ಗಲಾಟೆಯ ನಡುವೆ, ಅವಳಿಗಷ್ಟು ಮಾತ್ರದ ತಾಳ್ಮೆ ಇದ್ದದ್ದು ಆಶ್ಚರ್ಯವೇ ಸರಿ.

"ಅಕ್ಕಾ! ಬಾ! ಇಲ್ಲಿ! ಈಗ ಇವರನ್ನ ಹೇಗಾದರೂ ನಾವಿಬ್ಬರೂ ಸೇರಿ ಸರಿಯಾಗಿ ನಿಲ್ಲಿಸಬೇಕು!" ಎಂದು ಹೇಳುತ್ತ, ಚಂಚು ಸರಸುವನ್ನು ಮಂಚದ ಹತ್ತಿರಕ್ಕೆ ಎಳೆದೊಯ್ದಳು. ಅಲ್ಲಿಂದ ಹಾಸಿಗೆಯನ್ನು ಕೆಳಕ್ಕೆಳೆದು ರಾಯರ

ಪಕ್ಕದಲ್ಲಿ, ಉದ್ದಕ್ಕೂ ಅವರ ಎತ್ತರಕ್ಕೆ ತಕ್ಕ ಉದ್ದದಲ್ಲಿ ಹಾಸಿದಳು. ಅವರ ಹೊಟ್ಟೆ ನೆಲಕ್ಕೆ ಬಿದ್ದರೆ ತಗುಲಬಹುದಾದ ಜಾಗದಲ್ಲಿ ಒಂದೆರಡು ಮೆತ್ತನೆಯ ದಿಂಬುಗಳನ್ನಿರಿಸಿದಳು. ಅನಂತರ, ರಾಯರು "ಬೇಡ, ಬೇಡ, ಆಗೋದಿಲ್ಲ" ಎಂದು ನಿಶ್ಶಬ್ದವಾಗಿ ಕೂಗುತ್ತಿದ್ದರೂ ಲಕ್ಷಿಸದೆ, ಹೆಂಗಸರಿಬ್ಬರೂ ರಾಯರ ಕಾಲುಗಳನ್ನು ಬಲವಾಗಿ ಹಿಡಿದು, ಗೋಡೆಯ ಪಕ್ಕದಿಂದ, ಹಾಸಿಗೆಯ ಉದ್ದಕ್ಕೆ ಎಳೆದರು 'ಆದದ್ದೆಲ್ಲ ಆಗಿಹೋಗಲಿ, ಎಂದು ರಾಯರೂ ಎದೆ ಗಟ್ಟಿ ಮಾಡಿಕೊಂಡು, ಹೆ...ಂ ಎಂದು ಉಸಿರುಕಟ್ಟಿ ಗೋಡೆಯನ್ನು ಹಿಂಗಾಲಿಂದ ತುಳಿದು ತಳ್ಳಿದರು. ಮೂವರ ಮಿಶ್ರ ಪರಿಶ್ರಮದಿಂದ, ಮಹಾಬಲರಾಯರು, ಏನೂ ಜಖಂ ಆಗದೆ, ಹತ್ತಿಯ ರಾಶಿಯ ಮೇಲೆ,....ಬಿದ್ದರು! ಬೆನ್ನುಮೂಳೆ ಟಣ್ ಎನ್ನಲಿಲ್ಲ!

ಆಗ, ಹೊರಗಡೆ, ಯಾರೋ ಒಬ್ಬರು ಮತ್ತೊಬ್ಬನೊಂದಿಗೆ ಬಿರುಸಾಗಿ ಜಗಳ ಆಡುವ ಗದ್ದಲ ಕೇಳಿಸಿತು....ಚಂಚು ಹೊರಕ್ಕೆ ಓಡಿದಳು. ರಾಯರು ಮಲಗೇ ಇದ್ದರು; ಸರಸು ಅವರ ಪಕ್ಕದಲ್ಲೇ ಕುಳಿತು ಕಣ್ಣೊರಸಿಕೊಂಡಳು.

# ಜಟಕಾ ಗಾಡಿ

ಶೀನಪ್ಪನವರು ನಾಗರಾಜನ ಪ್ರಯಾಣಕ್ಕಾಗಿ ಆರಿಸಿದ ಜಟಕಾದವನು ನಿಜಕ್ಕೂ ಸಾಧು! ಆದರೆ, ದಾರಿಯಲ್ಲಿ ಗಾಡಿಯ ಭಾರ ವಿಪರೀತವಾಗಿ ಹೆಚ್ಚಿದ್ದರಿಂದ, ಅವನು ಹೆಚ್ಚು ಬಾಡಿಗೆ ಬೇಡಿದ, ಅಷ್ಟೆ!

ನಾಗರಾಜನೂ ನೀರಜಳೂ ಆ ಗಾಡಿಯ ಒಳಗಿಂದ ಅನೇಕ ವರ್ಷಗಳ ಅಗಲಿಕೆಯಿಂದ ತಮಗೆ ಹೊಸದಾಗಿ ಕಂಡ 'ಹಸುವಿನಗುಡಿ'ಯ ರಸ್ತೆಗಳನ್ನೂ, ಇಂಡ್ಯನ್ ಮುಂಭಾಗವನ್ನು ಅಮೇರಿಕನ್ ಮುಂಭಾಗವಾಡಿ, ಮೂಗನ್ನು ಕೊಯ್ದ ಶೂರ್ಪನಖಿಯರಂತೆ ಗುರುತು ಬದಲಾಯಿಸಿಕೊಂಡು ಮೆರೆಯುತ್ತಿದ್ದ ಬಂಗಲಿಗಳನ್ನೂ, ಬೋಗೆನ್‌ವಿಲ್ಲಾ ಗಿಡದ ನಿರ್ಗಂಧ ಕುಸುಮಾವಳಿಯಿಂದ ಮಿರುಗುತ್ತಿದ್ದ ಅಂಗಳಗಳನ್ನೂ ದಿಟ್ಟಿಸುತ್ತ, ತಂದೆ ಅತ್ತೆಯರನ್ನು ಹೇಗೆ ಪುರಸ್ಕರಿಸುವುದೆಂಬ ಆಲೋಚನೆಯಲ್ಲಿ ಮಗ್ನರಾಗಿ, ಜಟಕಾ ಒಳಗೆ ಕುಳಿತಿದ್ದರು! 'ನಿಧಾನವಾಗಿ ಬಿಡೋ, ರಸ್ತೆ ತುಂಬ ಹಳ್ಳಕೊಳ್ಳ.... ಬಸುರಿ ಹೆಂಗಸಿದಾಳೆ ಒಳಗೆ ಎಂಬುದನ್ನು ನೆನಪಿನಲ್ಲಿಡೊ,.... ಚಾವಟಿ ಕಡ್ಡಿಯಿಂದ ಕುದುರೆ ಪಕ್ಕೆಗಳನ್ನ ಹಾಗೆ ಚುಚ್ಚಬೇಡ, ಮಹರಾಯ' ಎಂದು ನಾಗರಾಜ ಕೇಳಿಕೊಂಡ. ಆಗ.... ಕುದುರೆ ನಿಂತೇಬಿಟ್ಟಿತು.

ಏಕೆಂದರೆ, ಅದರ ಮೂತಿಯನ್ನು ಹಿಡಿದು ಯಾರೋ ಹಿಂದಕ್ಕೆ ತಳ್ಳಿದರು! ಆದುವರೆಗೂ ನಾಗರಾಜನೊಂದಿಗೆ ಕನ್ನಡಿಯಲ್ಲೇ ಹರಟೆ ಹೊಡೆಯುತ್ತಿದ್ದ ಸಾರಥಿ ತಕ್ಷಣವೇ ಉರ್ದುವನ್ನು ಶರಣುಹೋದ ಗಾಡಿ ಹಿಂದಿನಿಂದ ಧುಮುಕಿ ನಾಗರಾಜ ಕುದುರೆಯನ್ನು ಹಿಡಿದು ಮುಂಗಾಲುಗಳ ಮೇಲೆ ನಿಲ್ಲಿಸಿದ. ದಾರಿಗಡ್ಡನಿಂತ ವ್ಯಕ್ತಿಯತ್ತ ಓಡಿದ. ಅದು ಒಬ್ಬ ಸಂನ್ಯಾಸಿ! ಕಾಷಾಯ ತೊಟ್ಟ ಕಟ್ಟಾಳು. ಐವತ್ತನ್ನು ಮೀರಿ ಅರವತ್ತನ್ನು ಸೇರದ ವಯಸ್ಸು. ಸ್ನಾನ ತೀರ್ಥವನ್ನೇ ಶಾಯಿಯಾಗಿ ಮಾರಬಲ್ಲ, ಎಂಬುವಷ್ಟು ಕರೀಬಣ್ಣ, ಮೂಗಿನ ತುದಿಯಲ್ಲಿ ಕಡಲೆಕಾಯಿ ಗಾತ್ರದ ಕರೀಗುಳ್ಳೆಯೊಂದು ಬೆಳೆದು ಬೆಳಗುತ್ತಿತ್ತು.... ಅರೆನರೆತ ಗಡ್ಡ.... ಸುಮಾರು ಹದಿನಾಲ್ಕಂಗುಲ.... ಗುಳ್ಳೆಯನ್ನು ಕಂಡ ತಕ್ಷಣವೇ ನಾಗರಾಜನಿಗೆ ತಿಳಿದುಹೋಯ್ತು, ಅವರು ಏಕೆ ಗಾಡಿ

ಯನ್ನು ನಿಲ್ಲಿಸಿದರೆಂದು. ಅವನು ಅವರನ್ನು ಬೊಂಬಾಯಲ್ಲಿ ಆಗಾಗ ಕಂಡದ್ದುಂಟು! ಒಂದೆರಡು ಸಲ, ದಾರಿಯಲ್ಲೇ ಕೊಡಹಿ ಕಳುಹಿಸಲಾಗದೆ, ಮನೆಗೆ ಕರೆತಂದದ್ದೂ ಉಂಟು. ಗಾಡಿಗೆ ಎದುರಾಗಿ ಬರುತ್ತಿದ್ದ ಆ ಸಂನ್ಯಾಸಿಗಳು ನೀರಜಳನ್ನು ಮೊದಲು ಗುರುತಿಸಿರಬೇಕು. ಎಲ್ಲವನ್ನೂ ತೊರೆದವರಾದ್ದರಿಂದ, ಅವಳು ಯಾವಾಗ ಮಂಗಡೂರಿಗೆ ಬಂದಳು, ಎಂದು ದೊಡ್ಡಮಗಳೂರಿಗೆ ಪ್ರಯಾಣ, ನಾಗರಾಜ ಎಲ್ಲಿ, ಏನುಮಾಡುತ್ತಿದಾನೆ, ಎಂಬುದನ್ನೆಲ್ಲ ಅರಿಯಲು ಸಹಜವಾಗಿ ಆತುರ. ಅದಕ್ಕಾಗಿ, ರಸ್ತೆ ಮಧ್ಯಕ್ಕೆ ಬಂದು, ಗಾಡಿಯನ್ನು ತಡೆದಿದಾರೆ, ಎಂದು ಅವನು ಊಹಿಸಿದ.

ನಾಗರಾಜನನ್ನು ಕಾಣುತ್ತಲೂ ಸಂನ್ಯಾಸಿಗೆ ಮತ್ತಷ್ಟು ಆನಂದವಾಯಿತು. "ಏನಯ್ಯ? ಎಲ್ಲಿಗೆ ಪ್ರೇರಣೆಯಾಗಿದೆ? ಅಪ್ಪನ ಮನೆಗೋ?" ಎಂದು ಹೇಳಿ, ಅವರು ನಾಗರಾಜನನ್ನು ಗಾಡಿಯೊಳಕ್ಕೆ ನೂಕಿ ತಾವೂ ಅವನ ಹಿಂದೆ ಹತ್ತಿ ಕಾಲುಮಡಿಸಿಕೊಂಡರು! "ಹೋಗುತ್ತಾ ಹೋಗುತ್ತಾ ಮಾತನಾಡಿಕೊಂಡು ಹೋಗೋಣ....ನಿನ್ನ ಹಾಗೆಯೇ ನನಗೂ ಅವಸರ....ಎಷ್ಟೋ ಸಲ ಪೂಜೆ ಮಾಡಿಸಿಕೊಂಡಿರುವ ಈ ಪಾದಗಳಿಗೆ ನಿನ್ನ ಉಪಕಾರದಿಂದ ಅಲ್ಪ ವಿಶ್ರಾಂತಿಯಾದರೂ ದೊರೆಯಲಿ" ಎಂದರು.

ಕರೀಸ್ವಾಮಿ ಎಂಬ ಅಡ್ಡಹೆಸರನ್ನಲ್ಲದೆ ನಾಗರಾಜನಿಗೆ ಆ ಅವಧೂತರ ನಿಜವಾದ ನಾಮಧೇಯ ತಿಳಿಯದು. ಎಂದೋ ಒಂದು ದಿನ, ದಾದರ್ ಸ್ಟೇಷನ್‌ನಲ್ಲಿ ಅವರಿಬ್ಬರ ಮೊದಲ ಭೇಟಿ ನಡೆಯಿತು. ನಾಗರಾಜನನ್ನು ಕನ್ನಡಿಗನೆಂದು ದಿವ್ಯ ಚಕ್ಷುಸ್ಸಿನಿಂದ ಪತ್ತೆಹಚ್ಚಿ ಕರೀಸ್ವಾಮಿ ಅವನನ್ನು ಸಮೀಪಿಸಿ ಕನ್ನಡದಲ್ಲೇ, "ಅಕೊ! ಆ ಗೂಡೆಯಲ್ಲಿಟ್ಟು ಮಾರುತ್ತಿದಾನಲ್ಲಾ, ಆ ಮೋಸುಂಬಿಗಳ ಪೈಕಿ ಮೂರು ಹಣ್ಣುಗಳನ್ನು ತಿನ್ನಬೇಕೆಂದು ಪ್ರೇರಣೆಯಾಗಿದೆ. ಒಂದು ರೂಪಾಯಿ ಕೊಡಬಲ್ಲೆಯಾ?" ಎಂದು, ಪಳಿಚ್ಚನೆ ಹಲ್ಲು ಕಿರಿದಿದ್ದರು. "ಸಿರಿಗನ್ನಡಂ ಗೆಲ್ಗೆ; ಕಾಷಾಯಂ ಕೈಬಿಡುಗೆ" ಎಂದು, ನಾಗರಾಜ ನಾಣ್ಯ ಕೊಟ್ಟ; ಆಮೇಲೆ, ಅವನ ವಿಳಾಸ, ಊರು ಕೇರಿ, ಕಸಬು, ಕುಲ, ವರ್ಣ, ಆಶ್ರಮ, ಎಲ್ಲವನ್ನೂ ತಿಳಿದುಕೊಳ್ಳಬೇಕೆಂದು ಕರೀಸ್ವಾಮಿಗೆ ಪ್ರೇರಣೆ ಆಯಿತು. ಮಂಗಡೂರು, ಮಹಾಬಲರಾಯರು, ಕಿಂಕರಪುರ, ಎಂದಾಗ ಅವರು ತುಂಬ ನಿಟ್ಟುಸಿರುಬಿಟ್ಟರು. ನಡುನಡುವೆ ಹಲ್ಲಸಾಲು ಹೊಳೆಯಿತು....

ಅಲ್ಲದೆ ನಾಗರಾಜನಿಗೆ ದರ್ಶನ ಕೊಡಬೇಕು ಅವನ ಸಹಧರ್ಮಿಣಿಯ ಸೌಟ ನಿಂದಲೇ ಸಾರು ಬಡಿಸಿಕೊಳ್ಳಬೇಕು, ಎಂಬ ಪ್ರೇರಣೆ ಕರೀಸ್ವಾಮಿಗೆ ಉಂಟಾ ಯಿತು. ಅವನ ಮನೆಗೂ ಹೋಗಿದ್ದರು. ಬನವಾಸಿ ಜೋಗಿಯ ರೂಪ ನಿರೂಪಣೆ ಮಾಡಿದಾಗ, ನಾಗರಾಜನ ಕಣ್ಣಮುಂದೆ ನಿಂತದ್ದು, ಕರೀ ಸ್ವಾಮಿಯ ಆಕಾರವೇ. ಕರೀಸ್ವಾಮಿಗೆ ವೆಂಗಡೂರಿನ ಬೀದಿಗಳ ಪರಿಚಯವೆಲ್ಲ ಚೆನ್ನಾಗಿಯೇ ಇತ್ತು. ಆತ ಸರ್ವವ್ಯಾಪಿ, ಸಕಲರಲ್ಲೂ ಅವರಿಗೆ ಏಕ ರೀತಿಯಾದ ಅಭಿಮಾನ, ಕುತೂಹಲ. ಆಸೇತುಹಿಮಾಚಲ ತಿರುಗಿದವರು, ಎಂದು ಅವರ ಸಂಭಾಷಣೆಯಿಂದ ಗೊತ್ತಾಗುವುದು.

"ಗೊತ್ತುಮಾಡಿದಾಗ, ಇಬ್ಬರೇ ಇಬ್ಬರು, ಎಂದು ಹೇಳಿದಿರಿ! ಬಸುರಿ ಹೆಂಗಸು ಒಬ್ಬರು, ಎಂದು ಪ್ರತ್ಯೇಕ ತಿಳಿಸಬೇಕಾಯಿತು!" ಎಂದು ಆಗಲೇ ಗೊಣಗುತ್ತಿದ್ದ ಗಾಡಿಯವನು ಈಗ ಒಂದೂವರೆ ಶತ ಪೌಂಡು ತೂಕದ ಸ್ವಾಮಿಗಳೊಬ್ಬರು ತೂರಿಕೊಂಡಮೇಲೆ, ಬಾಡಿಗೆಯನ್ನು ಹೆಚ್ಚಿಸಿಯೇ ತೀರ ಬೇಕೆಂದು ರಂಪ ಎಬ್ಬಿಸಿದ. ಸ್ವಾಮಿಗಳೇ ಅವನನ್ನು ಕನ್ನಡಿ ಶೀಮೆಯ ಉರ್ದುವಿನಲ್ಲೇ ಸಮಾಧಾನಪಡಿಸಿದರು. "ನೋಡು! ಅತ್ತೆಮನೆಗೆ ಹೋಗುವ ಸೊಸೆ ಇದಾಳೆ, ಗಾಡಿಯಲ್ಲಿ! ಈಗ ಅವರಿಗೆ ಹಿಂಸೆಕೊಡಬೇಡ ನೀನು! ಅಲ್ಲಿ ಇಳಿದಮೇಲೆ, ಅವರೇ ಇನಾಮು ಕೊಡುತ್ತಾರೆ, ನಿನ್ನ ಕಷ್ಟಕ್ಕೆ ತಕ್ಕಹಾಗೆ; ಅದನ್ನು ಇಸುಕೊಂಡು, ನಿನ್ನ ಕುದುರೆಗೆ ನನ್ನ ಹೆಸರು ಹೇಳಿ, ಒಂದು ಹಿಡಿ ಹುರುಳಿ ಚೆನ್ನಾಗಿ ಬೇಯಿಸಿಕೊಡು!" ಎಂದರು. "ಕಲ್ಲಿಲ್ಲ ಸಂಪೂರ್ಣ ಆರಿಸಿ ಬೇಯಿಸು" ಎಂದು ಸಲಹೆ ಇತ್ತರು.

"ನೀವೂ ಬನ್ನಿ! ಬಂದರೆ, ನಮ್ಮ ತಂದೆಯವರನ್ನು ನೋಡಬಹುದು. ಅವರು ಮನೆಯಲ್ಲೇ ಇರುತ್ತಾರೆ. ನನ್ನ ಬೊಂಬಾಯಿ ಜೀವನದ ವಿಷಯ ವಾಗಿ ನಾಲ್ಕು ಒಳ್ಳೆಯ ಮಾತಾಡಿದರೆ, ಅವರಿಗೂ ಸಮಾಧಾನ....ನನಗೂ ಅನುಕೂಲ! ಅಲ್ಲಿ ನಾನು ಇಲ್ಲಿಯಹಾಗೆ ಶುದ್ಧ ಉಂಡಾಡಿ ಆಗಿದ್ದೆ, ಅಂತ ತಿಳಿದಿರುತ್ತಾರೋ ಏನೊ? ನಿಮ್ಮ ಶಂಖದಿಂದ ಬಂದರೆ, ನನ್ನ ಕಥೆ ಪುಣ್ಯ ಕಥೆ ಆಗುತ್ತೆ" ಎಂದು ನಾಗರಾಜ ಕೇಳಿಕೊಂಡ. "ಇಲ್ಲ, ಇಲ್ಲ! ನಾನು ಇನ್ನೊಂದು ದಿನ ಅವರನ್ನ ಕಾಣುತ್ತೇನೆ....ಥಟಕ್ಕನೆ ನನ್ನನ್ನ ಕಂಡರೆ, ಅವರು ಗಾಬರಿ ಗೊಂಡಾರು....ಅಲ್ಲದೆ, ಈಗ, ಅವರ ಇರುಖಿಕೆ ಎಲ್ಲ ತಲೆಕೆಳಗಾಗಿರೋ ಸಮಯ,

ಈಗ ನಿನ್ನ ಜೊತೆ ಬರಬಾರದು, ಅಂತಲೇ ಪ್ರೇರಣೆ ಆಗುತ್ತಿದೆ....ಹೇಗಿದ್ದರೂ, ಇಲ್ಲೇ ಇರುತ್ತೀಯಲ್ಲಾ ನೀನೂನೂ....ಡಾ॥ ಚಂಚು ಅಂದೆಯಲ್ಲಾ, ಯಾರ ವರು? ನಿನ್ನ ಚಿಕ್ಕಮ್ಮನೇ?" ಎಂದು ಕರೀಸ್ವಾಮಿಗಳು ಪ್ರಶ್ನಿಸಿದರು. "ನಮ್ಮ ಚಿಕ್ಕಮ್ಮ—ಎಲ್.ಎಂ.ಪಿ ಗೆ ಎರಡು ಸಲ ಕೂತಳವಳು....ನಮ್ಮಿಬ್ಬ ರನ್ನ ಕಂಡರೆ ಬಹಳ ಪ್ರೀತಿ....ಗಂಡ ಇಲ್ಲ; ಕುಂಟು! ಮಕ್ಕಳಿಲ್ಲ" ಎಂದು ನಾಗರಾಜ ಉತ್ತರ ಕೊಡುತ್ತಿರುವಾಗಲೇ, "ರಾಷ್ಟ್ರೀಯ ಚಿಕಿತ್ಸಾಲಯವನ್ನು ನೋಡಬೇಕೆಂದು ಪ್ರೇರಣೆ ಆಗುತ್ತಿದೆ" ಎಂದು ಹೇಳುತ್ತಾ, ಕರೀಸ್ವಾಮಿ ಗಳು ಗಾಡಿಯಿಂದ ಧುಮುಕಿದರು. "ಅತ್ತ ಕಡೆ ಅಲ್ಲ, ಅದು! ಇತ್ತ ಕಡೆ! ....ಸಾಮಿಗಳೆ!" ಎಂದು ಗಾಡಿಯವನು ಅವರ ಪಾದಗತಿಯನ್ನು ತಿದ್ದಿದ. ಸ್ವಾಮಿಗಳು ಮಾಯವಾದರು.

ಅವರನ್ನು ಮೂರು ಫರ್ಲಾಂಗ್ ದೂರ ಸಾಗಿಸಿದ ಸಾಹಸಕ್ಕೆ, ಎರಡಾಣೆ ಹುರುಳಿ ಹೆಚ್ಚು ಸಾಲದು ತನ್ನ ಕುದುರೆಗೆ, ಎಂಬುದೇ ಗೋಕುಲದ ಬಾಗಲಲ್ಲಿ, ಜಟಕಾದವನ ವಾದ. 'ಅವರನ್ನ ನನ್ನ ಗಾಡೀಲಿ ಕೂರಿಸಿ ನೀವೇ ಅಷ್ಟು ದೂರ ಎಳೆದಿದ್ದರೆ, ಎಂಟು ಬಟ್ಟಲು ಕಾಫಿ ಕುಡಿಯುತ್ತಿದ್ದಿರಿ.... ಇಲ್ಲವೋ, ಹೇಳಿ....' ಎಂದು ಅವನು ಮೊದಲು ತುಂಬ ವಿನಯದಿಂದಲೇ ಕೇಳಿದ. 'ಇಬ್ಬರನ್ನ ಇಲ್ಲಿತನಕ ತರುವುದಕ್ಕೆ ನೀನು ಹೇಗಿದ್ದರೂ ಬರ ಬೇಕಾಯಿತು....ಬರೀ ನಮ್ಮೆಲ್ಲರ ನಶೀಬಿಂದ ನಮಗೆ ಅವರು ಅರ್ಧ ದಾರೀಲಿ ಸಿಕ್ಕರು; ನಿನ್ನ ಕುದುರೆ ನಶೀಬಿಂದ ಅವರು ಅರ್ಧ ದಾರೀಲೇ ಇಳಿದರು! ಅಂಥಾದ್ದರಲ್ಲಿ, ಆಕಾಶದಿಂದ ಕಿಸೆಗೆ ಎರಡಾಣೆ ಬಿದ್ದಹಾಗೆ, ಬೀಳುತ್ತಾಯಿ ರೋದು, ಸಾಲದು, ಅಂತೀಯಲ್ಲೋ!' ಎಂದು ನಾಗರಾಜ ಉತ್ತರ ಹೇಳಿದ. ತಂದೆ ಮನೆ ಹೊಸಲಿಗೆ ಕಾಲಿಡುತ್ತಲೂ, ವ್ಯಾಜ್ಯವೇ ಮೊದಲಾಯಿತಲ್ಲಾ, ಇದೆಂಥ ಅಪಶಕುನ, ಎಂಬುದು ಆವನ ಕೋಪಕ್ಕೆ ಕಾರಣ. "ಹೋಗ್ರಿ, ಹೋಗ್ರಿ! ದೊಡ್ಡಮನುಷ್ಯರ ಮಕ್ಕಳು ಅಂದ್ರೆ ಹೀಗೇನೆ! ಕಂಡಕಂಡವರ ಮಕ್ಕಳಿಗೆಲ್ಲ ಬಾಯಿ ಬಡಿದು ಬೊಕ್ಕೋದು........ಬಡವರನ್ನು ಕಂಡರೆ, ಬಾ, ಪೋಲೀಸ್ ಸ್ಟೇಷನ್ನಿಗೆ ಎನ್ನುವುದು....ಎರಡಾಣೆಗಿಂತ ಹೆಚ್ಚಾಗಿ ಹತ್ತಿರ ಇಲ್ಲ, ಅಂದುಬಿಡಿ! ಅದನ್ನೂ ಬಿಸಾಕಿ ಬಿಡುತ್ತೇನೆ, ನಿಮ್ಮ ಮುಖಕ್ಕೆ" ಎಂದು ಜಟಕಾದವನೂ ತಾಳ್ಮೆ ಕಳೆದುಕೊಂಡ. ನಾಗರಾಜನ ಪಕ್ಕದಲ್ಲೇ

ನೀರಜ ನಿಂತಿದ್ದಳು. “ನೀವು ಹೇಳಿ, ಅಪ್ಪಾ ! ನಿಮ್ಮ ಮಾತು ಕೇಳುತ್ತಾರೆ, ಸ್ವಾಮಿಯವರು, ಬಸುರಿ ಮಾತು ತೆಗೆದುಹಾಕೋದಿಲ್ಲ....” ಎಂದ, ಸಾರಥಿ! ಅದನ್ನು ಕೇಳಿ, ನಾಗರಾಜನಿಗಿನ್ನೂ ರೇಗಿತು. “ಹೇ! ಹೆಂಗಸರ ಹತ್ರ ಯಾಕೊ ನಿನ್ನ ಮಾತು! ಹೋಗೋ, ಗೇಟಿನಾಚೆ” ಎಂದು ಬುಕಬುಕನೆ ಕಿಡಿಕಾರಿದ.

ಆಗ, ಅಲ್ಲಿಗೆ, ಚಂಚು ಬಂದಳು. ಜಟಕಾದವನು ಅವಳನ್ನು ಕಂಡ ಕೂಡಲೇ, ಎರಡಾಣೆಯನ್ನು ನಗುತ್ತ ತೆಗೆದು, “ಆ ಮಾತು ಮಾತ್ರ ಬೇಡಿ, ನನ್ನೊಡೆಯ! ಅಂಥ ಹೆಂಗಸರು ಇದಾರೋ ಏನೋ, ನನಗೆ ಗೊತ್ತಿಲ್ಲ. ಆದರೆ, ಈ ತಾಯಿವರು ಇದಾರಲ್ಲಾ, ನಮ್ಮ ಡಾಕ್ಟರಮ್ಮಾವರು, ಇವರು ಹೆಂಗಸರು ಅಂತ, ನಿಮ್ಮ ಮಾತು ಕೇಳಿಕೊಂಡು, ನಾವು ಇವರ ಹತ್ರ ಬಾಯಿಮುಚ್ಚಿಕೊಂಡಿದ್ದರೆ, ಅವರ ಆಸ್ಪತ್ರೆಗೆ ನಾವು ಹೋಗುವಹಾಗೆಯೇ ಇಲ್ಲ! ಅವರೇನು, ಕುದುರೆ ಡಾಕ್ಟರೇನು, ಮಾತಾಡದ ರೋಗಿಗೆ ಔಷಧಿ ಕೊಡೋದಕ್ಕೆ. ನೋಡಿ, ಸ್ವಾಮಿ! ಅವರ ಮುಖ ನೋಡಿ, ಬಿಟ್ಟಿದೇನೆ ಇವತ್ತು, ಎರಡಾಣೇನ’ ಎಂದು ಹೇಳಿ ಆ ನಿಕ್ಕಲ್ಲನ್ನು ಹೊರಕಿವಿಯ ಮೇಲುಭಾಗದಲ್ಲಿ ತುರುಕಿದ.... ಚಂಚುವಿಗೆ ಸಲಾಮು ಮಾಡುತ್ತ, ಗೇಟಿನಾಚೆ ಹೋಗಿ, ಚಾವಟಿ ಬೀಸಿದ.... “ಶ್! ಶ್ಯ! ಬಾ! ನೀರಜ!....ಒಳಕ್ಕೆ ಬಾ, ನಾಗರಾಜ” ಎಂದು ಚಂಚು ಅವರನ್ನು ನಿಶ್ಶಬ್ದವಾಗಿ ಕರೆದೊಯ್ದಳು. ಮುಂದಿನ ಹಾಲಿನಲ್ಲೇ ಇಬ್ಬರನ್ನೂ ನಿಲ್ಲಿಸಿಕೊಂಡು, “ನೀವು ಬಂದ ಗಳಿಗೆ ಚೆನ್ನಾಗಿಲ್ಲ. ಭಾವ ಇನ್ನೂ ಮಲಗೇ ಇದಾರೆ!” ಎಂದಳು. ನಾಗರಾಜನಿಗೆ ಗಾಬರಿ ಆಯಿತು. ಶೀನಪ್ಪನವರು ರಾಯರ ಖಾಯಿಲೆ ವಿಷಯ ತನಗೆ ಏನೂ ಹೇಳಲಿಲ್ಲವಲ್ಲಾ, ಅವರ ಮೈಗೆ ಜ್ವರ ತಗುಲಿದ್ದರಿಂದಲೋ ಏನೋ ಶೀನಪ್ಪ ತನ್ನನ್ನು ಆತುರವಾಗಿ ಗಾಡಿಮಾಡಿ ಕಳುಹಿಸಿದ್ದು, ಕರೀಸ್ವಾಮಿಗಳ ಮಾತಿನಲ್ಲೂ ತಲೆಕೆಳಗು ಎಂಬ ಅಪಾಯದ ಸೂಚನೆಯೊಂದಿತ್ತು—ಎಂಬಿವೇ ಮುಂತಾದ ಶೋಚನೆಗಳು ನಾಗರಾಜನ ಮನಸ್ಸಿನಲ್ಲಿ ಹುಟ್ಟಿದುವು. ಅವನು, ಚಂಚು ಕಡೆ ನೋಡಿ, ನಡುಗುತ್ತ, “ಕರೀಸ್ವಾಮಿಗಳು ಹೇಳಿದರು, ಗಾಡಿಯಲ್ಲಿ ಕೂತಿದ್ದಾಗ, ಎಲ್ಲ ತಲೆಕೆಳಗಾಗಿರೋ ಸಮಯ ಅಣ್ಣನಿಗೆ ಎಂದರು....ಆಗಲೇ ನನಗೆ ಚುರುಕ್ ಎಂದಿತು....ಏನಾಗಿದೆ, ಅಪ್ಪನಿಗೆ” ಎಂದು ತವಕಪಟ್ಟ.

" ತಲೆಕೆಳಗಾಗಿದ್ದ ಸಮಯ ಮುಗಿಯಿತು....ಅದು, ಎರಡು ನಿಮಿಷ ಗಳ ಹಿಂದೆ....ಈಗ, ಯಥಾ ಸ್ಥಿತಿ ಮಲಗಿದ್ದಾರೆ....ಬಾ !....ಬಾ, ನೀರಜ ! " ಎಂದು ಚಂಚು ಒಳಕ್ಕೆ ನಡೆದಳು.

# ಹಾಸಿಗೆ

ರಾಯರು ತಲೆಕೆಳಗಾಗಿ ನಿಂತದ್ದು ತಮ್ಮ ಆರೋಗ್ಯ ಸಾಧನೆಗಾಗಿ, ಎಂದು ತಿಳಿದುಕೊಂಡಾಗ, ಸರಸಮ್ಮನಿಗೆ ತುಂಬ ವ್ಯಥೆಯಾಯಿತು. ಮನಃಪೂರ್ವಕವಾಗಿ, ಸ್ವಬುದ್ಧಿಯಿಂದಲೇ, ಅವರು ಈ ರೀತಿ ಊರ್ಧ್ವ ಮೂಲರಾಗುವರೆಂದು ಅವಳು ಊಹಿಸಿರಲಿಲ್ಲ. ರಾಯರ ಉದ್ದೇಶ ಪುರಸ್ಕೃತವಾದರೂ, ಅವರ ಉಪಾಯ ತೀರ ತಿರಸ್ಕೃತ, ಎಂದು ಅವಳು ರಾಯರಿಗೆ ಹೇಳಿದಳು. 'ಇನ್ನುಮೇಲೆ ನಮ್ಮ ಚಂಚು ಕೂಡ ಮನೆಯಲ್ಲಿರುವುದಿಲ್ಲ; ಆಸ್ಪತ್ರೆ ಬಂಗಲೆಗೆ ಹೊರಟುಬಿಡುತ್ತಾಳೆ. ನಾನೊಬ್ಬಳೇ ನಿಮ್ಮ ಅಂಗಾಲು ಹಿಡಿದು ಈ ದೇಹವನ್ನು ಇಳಿಸಲಾರೆ' ಎಂದು ಅವಳು ರೇಗಿದಳು. 'ನೀನೊಬ್ಬಳೇ ಏಕೆ? ನಾಗರಾಜ ನೀರಜ ಇಬ್ಬರನ್ನೂ ಕರೆಯಿಸಿಕೊ' ಎಂದು ಧೈರ್ಯವಾಗಿ ಸೂಚಿಸಿಯೇ ಬಿಡೋಣವೆಂದು ರಾಯರು ಮಲಗಿಕೊಂಡೇ ಚಿತ್ತದಲ್ಲಿ ನೆನೆದರು. ನಿಮಿಷ ನಿಮಿಲಿತಾಕ್ಷನಾಗಿ ಸಹಧರ್ಮಿಣಿಯನ್ನು ನೋಡಿದರು. ಆದರೆ, ಆ ಸೂಚನೆಗೆ ಪ್ರತಿಯಾಗಿ ಅವಳು ಪ್ರಯೋಗಿಸಬಹುದಾದ ವಾದ ಸರಣಿಯನ್ನು ತಡೆಯಲು ತ್ರಾಣ ಸಾಲದೆ ಅವರು ಮೂಕರಾದರು.

ಅಷ್ಟರಲ್ಲಿ, ಮಗನೂ ಸೊಸೆಯೂ ಹಾಸಿಗೆಯ ಬಳಿಗೆ ಬಂದರು. ಸರಸಮ್ಮ, ಕುಳಿತ ತಾಣದಿಂದ, ನಾಗರಾಜನನ್ನೇ ದಿಟ್ಟಿಸುತ್ತಿದ್ದಳು. ಅವಳು ಚಂಚುವನ್ನು ನೋಡಲಿಲ್ಲ; ನೀರಜಳನ್ನು ಮಾತನಾಡಿಸಲಿಲ್ಲ. ಮಗನನ್ನೂ ಸೊಸೆಯನ್ನೂ ಮನೆಯಲ್ಲಿ ನೆಲೆಸಿಕೊಳ್ಳಬೇಕೆಂದೇ ಅವಳು ಸಂಕಲ್ಪಮಾಡಿದ್ದಳು, ನಿಜ! ಅದುವರೆಗೂ, ಹತ್ತಾರು ಜನರಮೇಲೆ ಸದಾ ಕಾರಭಾರ ನಡೆಯಿಸಿ, ಹಂಸತೂಲಿಕಾದರ್ಶದಲ್ಲಿ ಪವಡಿಸಿದ್ದ ಸರಸಮ್ಮನ ಮೇಲುಮನಸ್ಸು ಸೊಸೆಯಮೇಲೆ ಪ್ರೀತಿ ಕರುಣೆ ವಾತ್ಸಲ್ಯಗಳನ್ನು ಪ್ರಕಟಿಸುತ್ತಿದ್ದಾದರೂ,....ಅವಳ ಕೆಳ ಮನಸ್ಸು, ಯಾರಮೇಲೆ ಪ್ರತಿಷ್ಠೆಯನ್ನು ನಿಲಿಸುವೆ, ಎಂದು ಕಾತುರಪಡುತ್ತಿತ್ತು; ಕದನ ಕುತೂಹಲದಿಂದ ಕಲುಷಿತವಾಗಿತ್ತು. ನಮ್ಮ ಒಳಮನಸ್ಸಿನ ಕೊಳೆ ನಮಗೂ ಕಾಣಿಸದು; ಏಕೆಂದರೆ, ಅದು ಕಾಣದಂತೆ, ನಾವೇ ಅದರಮೇಲೆ ಹೂಗಿಡಗಳನ್ನು ಬೆಳೆಸಿಬಿಡುತ್ತೇವೆ!

"ನೀರಜಳ ಬಾಯಿಂದ ಹೊರಡುವ ಮಾತುಗಳಲ್ಲಿ ಕ್ಷಮಾಪಣೆಯ ಧ್ವನಿ ಕೊಂಚವಾದರೂ ಕೇಳಿಬಂದರೆ, ಅದನ್ನೇ ಅಡಿಪಾಯವಾಗಿ ಅಳವಡಿಸಿ ಕೊಂಡು, "ಸರಿ! ಬಾ! ಇಲ್ಲೇ ಇದ್ದುಕೊ! ಹಿರಿಯರ ಮಾತನ್ನು ಮುಂದೆ ತೆಗೆದುಹಾಕಬೇಡ" ಎಂದು ಅನುಗ್ರಹಿಸಿ, ಆಹ್ವಾನಿಸಿ, ಇರಿಸಿ ಕೊಳ್ಳುವುದು ಮಗ ಮೊಮ್ಮಗ ಸಹಿತವಾಗಿ ಸುಖವಾಗಿ ದೇವರ ಧ್ಯಾನ ಮಾಡುತ್ತಿರುವುದು. ಇದೇ ನನ್ನ ರಿಟೈರ್ ಜೀವನ. ನನಗಷ್ಟೇ ಸಾಕು. ಇವರು ಬೇಕಾದರೆ, ತಲೆಕೆಳಗಾಗಿ ಕುಣಿದಾಡಲಿ"—ಎಂದು ಸರಸಮ್ಮ ಯೋಚಿಸಿದಳು.

ಜಟಕಾದಲ್ಲಿ ಇಬ್ಬರೂ ಆಲೋಚಿಸಿ ನಿಶ್ಚಯಿಸಿ, ಉರುಹೊಡೆದಿದ್ದ ಉಪಚಾರದ ಮಾತುಗಳನ್ನೆಲ್ಲ, ರಾಯರ ಪರ್ಯಂಕಶಯನದಿಂದುಂಟಾದ ಪರದಾಟದಲ್ಲಿ, ನೀರಜ ಮರೆತೇಬಿಟ್ಟಳು! ಆ ಕೋಣೆಯಲ್ಲಿ, ಅಂದು, ಬಿಗಿದ ತುಟಿಯನ್ನು ಮೊದಲು ಬಿಚ್ಚಿದವರು, ಮಹಾಬಲರಾಯರು. "ಏನೂ ಇಲ್ಲ, ಚಂಚು! ಹೆದರಬೇಡ! ಇವಳಿಗೆ ಆಗಲೇ ಎಲ್ಲ ವಿವರಿಸಿದೆ. ಯೋಗಾಸನ ಉಪದೇಶವಾಗಿದೆ, ನನಗೆ, ಚಿಕ್ಕಂದಿನಲ್ಲಿ. ಕಾಯಕಲ್ಪದ ಬದಲು ಇದಾದರೂ ಆಗಲಿ ಅಂತ ಬೆಳಗ್ಗೆ ಎದ್ದು ಗೋಡೆ ಮಗ್ಗುಲಿಗೆ ಬಂದೆ, ಅಷ್ಟೆ!" ಎಂದರು. ಚಂಚು ನಕ್ಕೇಬಿಟ್ಟಳು! ಸರಸಮ್ಮನ ಹಣೆ, ಗಂಟು ಗಂಟಾಯಿತು. ಮಾವನವರ ಮೋರೆಯನ್ನು ಸೊಸೆ ಎದುರು ಮೂರು ಕಾಸಗಲ ಮಾಡಬಾರ ದೆಂಬುದು ಅವಳ ಮತ! ನಾಗರಾಜನಿಗೂ ನಗು ಬರದೆ ಇರಲಿಲ್ಲ. ಎಂಥದ್ದೊ ಭಾರಿ ಅನಾಹುತವನ್ನು ತಂದೆ ವಿಷಯವಾಗಿ ಕಲ್ಪಿಸಿಕೊಂಡು ದುಗುಡ ತುಂಬಿ ಕೊಂಡಿದ್ದ ಅವನ ಮನಸ್ಸು ಥಟಕ್ಕನೆ ಹಗುರವಾಯಿತು. ಅವನು ಜಾಣತನ ದಿಂದ ನಗುವನ್ನು ನುಂಗಿದ. ನೀರಜಳ ಬೆನ್ನನ್ನು ಎಡಗೈಯಿಂದ ತಿವಿದು, ದಾರಿಯಲ್ಲಾದ ತೀರ್ಮಾನದಂತೆ, ತಾಯಿಗೆ ನಮಸ್ಕರಿಸುವಂತೆ, ನೂಕಿದ.

ನೀರಜಳ ನಮಸ್ಕಾರ ತೃಪ್ತಿಕರವಾಗಿರಲಿಲ್ಲ. ಅವಳ ಆಗಿನ ದೇಹ ಸ್ಥಿತಿಯಲ್ಲಿ ಹುಡುಗಿ ಅಷ್ಟು ಬಗ್ಗಿದ್ದೇ ಹೆಚ್ಚು! ಅವಳ ಪ್ರಯತ್ನಕ್ಕೆ ಮೆಚ್ಚಿ, ಕೂಡಲೇ ಸಾಕೆಂದು ಸರಸಮ್ಮ ಅಡ್ಡ ಕಟ್ಟಿ, ಅರ್ಧದಲ್ಲೇ ಅವಳನ್ನು ಹಿಡಿದೆತ್ತ ಬೇಕಾಗಿತ್ತು; ಮಾಡಲಿಲ್ಲ. ತನ್ನ ಅಂಗಳದಲ್ಲಿ ಬೆಳೆದ ಮಗಳಾಗಿದ್ದರೆ, ಸರಸಮ್ಮ ಖಂಡಿತವಾಗಿಯೂ ಆ ನಮಸ್ಕಾರಕ್ಕೆ ಅರ್ಧವಿರಾಮ ಹಾಕುತ್ತಿದ್ದಳು.

ಆದರೆ,....ಯಾರೋ ತಂದೊಪ್ಪಿಸಿದ ಪದಾರ್ಥ!....ನೀರಜಳು ಏದುತ್ತ, ಎದ್ದು ನಿಂತು, ಹಾರಾಡುತ್ತಿದ್ದ ಕುರುಳೋಳಿಯನ್ನು ತಿದ್ದಿ, ಬಿಚ್ಚಿಹೋದ ಸೆರಗನ್ನು ಮತ್ತೆ ನಡುವಿಗೆ ಸುತ್ತಿಕೊಂಡಳು. "ಈ ಮಗುವನ್ನಾದರೂ ಉಳಿಸಿಕೊಡಿ, ನನಗೆ! ಅತ್ತೆಮ್ಮನವರೇ!" ಎಂದಳು. ಅವಳ ಅಚಾತುರ್ಯಕ್ಕೆ ಬೆಚ್ಚಿಬಿದ್ದ ನಾಗರಾಜ ಅವಳ ಹೆಬ್ಬೆಟ್ಟನ್ನು ತುಳಿದ. ಆದರೆ, ಆಡಿದ ಮಾತು ಅತ್ತೆಯ ಕಿವಿಯನ್ನು ಸೇರಿಬಿಟ್ಟಿತ್ತು!

ಕ್ಷಮಾಪಣೆಯ ಧ್ವನಿಗಾಗಿ ಕಿವಿ ಅರಳಿಸಿದ್ದ ಸರಸಮ್ಮನಿಗೆ ಸಿಡಿಲು ಬಡಿದಂತಾಯಿತು. "'ನಾನು ಮಾಡಿದ್ದೆಲ್ಲ ಮಹಾಪರಾಧ! ನನ್ನನ್ನು ಕ್ಷಮಿಸಿ ನಿಮ್ಮ ಮಡಿಲೊಳಗಿರಿಸಿಕೊಳ್ಳಿ' ಎಂದು ಹೇಳುವ ಬದಲು, ಅವಳೆಂದದ್ದೇನು? ಅದರೊಳಗಿನ ಹೂರ್ಣವೇನು? ಹಿಂದಕ್ಕೆ, ಇವಳ ಮೈ ಇಳಿದದ್ದು ನನ್ನ ಶಾಪದಿಂದಲೆ? ಎಲೆ, ಘಾತಕಿ! ಮೊಮ್ಮಕ್ಕಳನ್ನು ತಿಂಬ ಮಾರಿ ನಾನು, ಎಂಬುದುತಾನೆ ಇವಳ ಮಾತಿನೊಳಗಣ ಮುಳ್ಳು? ಇವಳ ಬಿನ್ನಾಣದ ಬಿಲ್ಲು ಎಷ್ಟು ಡೊಂಕಾದರೇನು? ಬಿಡುವ ಬಾಣ ನೆಟ್ಟಗೆ ಎದೆಯನ್ನೇ ಇರಿಯುತ್ತೆ! ಅಯ್ಯೊ! ಅಯ್ಯೊ! ದಿನವೂ ಇನ್ನು ಇವಳ ವಾಗ್ಘಾತ ತಡೆದುಕೊಂಡು ಹೇಗೆ ಬದುಕುವುದು?" ಎಂಬ ಭೀತಿಯಿಂದ, ಅವಳ ಕಣ್ಣಲ್ಲಿ ನೀರು ತುಂಬಿತು.

"ಇವಳನ್ನ ತಾಯಿ ಮನೆಗೆ ಯಾವಾಗ ಕರೆದುಕೊಂಡು ಹೋಗುತ್ತೀಯೋ?" ಎಂಬ ಪ್ರಶ್ನೆ ತಾನಾಗಿಯೇ ಸರಸಮ್ಮನ ಬಾಯಿಂದ ಬಿತ್ತು. ಅದನ್ನು ಕೇಳಿ ಇತರರೆಲ್ಲರಿಗೂ ತುಂಬ ನಿರಾಶೆಯಾಯಿತು. 'ಅಕ್ಕನ ಬುದ್ಧಿ ಈ ವಯಸ್ಸಿನಲ್ಲೂ ತಿಳಿಯಾಗಲಿಲ್ಲವಲ್ಲಾ! ಹುಡುಗಿ ಅತಿವಿನಯದಿಂದ ಮಾತಾಡಿತು. ಹಿಂದಿನದನೆಲ್ಲ ಹೊಟ್ಟೆಯೊಳಗಿರಿಸಿಕೊಂಡು, 'ಅತ್ತೆ! ನಿಮ್ಮ ಆಶೀರ್ವಾದ ಬೇಕು, ನನಗೆ! ನಿಮ್ಮ ಕೋಪಕ್ಕೆ ತುತ್ತಾಗಿ ಓಡಿಹೋದದ್ದರಿಂದಲೇ ನನಗೆ ಮೊದಲನೆಯದು ದಕ್ಕಲಿಲ್ಲ. ನಿಮ್ಮ ಯೋಗ್ಯತೆಗೆ ತಕ್ಕಹಾಗೆ ನಡೆದುಕೊಳ್ಳಲು ನನಗೆ ಆಗ ಅನುಭವ ಸಾಲದು....ಇದನ್ನಾದರೂ ನನಗೆ ಕೊಡಿಸಿ! ನೀವು ನನ್ನನ್ನು ಕ್ಷಮಿಸಿದರೆ, ನನ್ನ ಕರ್ಮ ಸವೆಯುತ್ತದೆ, ನನ್ನ ದುರ್ದೈವ ತೊಲಗುತ್ತೆ' ಎಂದು ರಂಗೋಲಿ ಕೆಳಗೆ ನುಸುಳಿಕೊಂಡು ಅದು ಹೇಳುತ್ತೆ. ಇನ್ನೂ ಕೆಳಗೆ ತಗ್ಗಬೇಕು ಅಂದರೆ, ಹೇಗೆ ಸಾಧ್ಯ?....ನಾನು ಬೇರೆ, ನಿನ್ನೆ ಪೂರ್ತಿ ಇಡೀ ದಿನ, ಮನ್ನಿಸು ಮನ್ನಿಸು, ವಿದ್ಯಾವತಿ ಹುಡುಗಿ,

ವಿನಯ ಗೊತ್ತಿಲ್ಲ, ಅಂತ, ಊದಿದೇನೆ ಕಿವಿಯಲ್ಲಿ,....ಅಕ್ಕನ ಮನವೂ ಮುಗ್ಗಲ ಅಕ್ಕಿಯೂ ಸಮ, ಎಂಬ ಗಾದೇನ ನಿಜ ಅಂತ ಅನ್ನಿಸಿಬಿಟ್ಟಳಲ್ಲಾ" ಎಂದು ಚಂಚು, ಗೋಡೆಗೆ ಒರಗಿಕೊಂಡಳು. ಅನೇಕ ವರ್ಷದ ಸಂಗ್ರಾಮ ಮುಗಿದು ಶರಣಾಗತಳಾದರೂ ಕೌಲು ಕರಾರುಗಳ ಸೂಚನೆಯೇ ಕಾಣ ಬರಲಿಲ್ಲವಲ್ಲಾ, ಎಂದು ನೀರಜ ಗಾಬರಿಗೊಂಡಳು....ನಾಗರಾಜನಿಗೆ ಜೀವನವೇ ಅಸಹ್ಯವೆನಿಸಿತು. ಕಿಸೆಯಲ್ಲಿ ಸಿಗರೇಟಿದೆಯೇ, ಎಂದು ಅವನು ಹುಡುಕಲಾರಂಭಿಸಿದ. ಇದ್ದರೆ, ಹೊರಗೆ ಹೋಗಿ, ಹೊಗೆ ಹೀರೋಣ ಎಂಬುದು ಅವನ ಆಲೋಚನೆ! ರಾಯರು ಅಸಹಾಯಕರಾಗಿ ಎಲ್ಲರ ಮುಖವನ್ನೂ ನೋಡುತ್ತ ಮಲಗಿದ್ದರು. ಗಾಳಿ ಮುಳ್ಳುಮುಳ್ಳಾಗಿ ಬೀಸುತ್ತಿತ್ತು.

ಒಂದೆರಡು ನಿಮಿಷ ಎಲ್ಲರೂ ಮೌನವಾಗಿ ನಿಂತಿದ್ದರು. ಅದನ್ನು ಭೇದಿಸಿದವಳು, ಚಂಚು. 'ತಾಯಿ ಮನೆಗೆ ಹೇಗೆ ಕರೆದುಕೊಂಡು ಹೋದಾನು, ಆ ಹಳ್ಳಿಗೆ, ಅವನು? ಈಗಿನ ಸ್ಥಿತಿಯಲ್ಲಿ....ಇವಳ ವೈ ಇರೋ ಲಕ್ಷಣದಲ್ಲಿ ....ಬೊಂಬಾಯಲ್ಲಿದ್ದು ಬಿಡಾಗಿರುವ ಬಸುರೀನ....ನಮ್ಮ ಚಿಕಿತ್ಸಾಲಯ ದಲ್ಲೇ ಹೆರಿಗೆ....ಇಲ್ಲೇ ಇರುತ್ತಾಳೆ, ನೀರಜ.'

"ಇಲ್ಲೇ....ಅಂದರೆ?" ಎಂದು ಆಗ ಸರಸಮ್ಮ ಕೇಳಬಾರದಾಗಿತ್ತು. ನಾಗರಾಜನಿಗೆ ಕೋಪ ಉಕ್ಕಿಬಂತು. ನಿರಪರಾಧಿಯಾದ ನೀರಜಳನ್ನ, ಅಪ್ಪಿ ತಪ್ಪಿ ಅವಳು, ಅನಂತರ ಹೇಳಬೇಕೆಂದಿದ್ದ ಉಪಚಾರದ ಮಾತನ್ನು ಪ್ರಾರಂಭದಲ್ಲೇ ಹೇಳಿದ್ದಕ್ಕಾಗಿ, ಹೀಗೆ ಹಿಂಸಿಸುವುದು ಅನ್ಯಾಯವೆಂದು ರೇಗಿತು. ಅಪ್ಪನ ಬೆಪ್ಪುತನವನ್ನು ಕಂಡು ಅವನು ಅಸಹ್ಯಗೊಂಡ. "ಅದರ ಅರ್ಥವನ್ನು ನೀನೇ ವಿವರಿಸಬೇಕು, ಅಪ್ಪ! ಅಮ್ಮನಿಗೆ" ಎಂಬ ಮಾತಿನಿಂದ, ನಾಗರಾಜ, ಎಲ್ಲರಿಗೂ, ನಡುವೆ ಒಂದು ಗಂಡಸು ಮಲಗಿದೆ, ಎಂಬುದನ್ನು ನೆನಪುಕೊಟ್ಟ.

ರಾಯರಿಗೂ ಅಸಮಾಧಾನ ಕಂಠನಾಳ ತನಕ ತುಂಬಿಬಂದಿತ್ತು. "ನೋಡು ನಾಗರಾಜ! ನಾನು ಈಗ ಅರ್ಥ ಹೇಳಿದರೆ, ಅದರಿಂದ ಅನರ್ಥವೇ ಹೆಚ್ಚು" ಅಂದರು, ಸರಸಮ್ಮನಿಗೆ ಕೇಳಿಸಬಾರದು ಎಂಬಷ್ಟು ಮೆಲುದನಿಯಲಿ. ಆದರೂ, ಅವಳಿಗೆ ಕೇಳಿಸದೆ ಇರಲಿಲ್ಲ.

"ಆಗಲೇ ಆ ಹುಡುಗಿ ಅಪಶಕುನ ನುಡಿದದ್ದಾಗಿದೆ; ಇನ್ನು, ನೀವೆಲ್ಲ ಸೇರಿ ಬಿಸುಗೆಮಾಡಿ ಈ ಬಂಗಲಿಗೆ ಸೇರಿಸಿ, ಏನಾದರೂ ಅನಾಹುತವಾದರೆ,

ನನ್ನ ತಲೆಮೇಲೆ ಗೂಬೆ ಕೂರಿಸುತ್ತೀರಿ! ನನಗೆ ಆ ಅಲಂಕಾರ ಬೇಕಿಲ್ಲ. ಹೆರಿಗೆ ಜವಾಬ್ದಾರಿ ಬಾಣಂತಿ ಶುಶ್ರೂಷೆ ಸೌಭಾಗ್ಯಶುಂಠಿ, ಎಲ್ಲ ಚಂಚೂನೇ ವಹಿಸಿಕೊಳ್ಳಲಿ, ಅವಳ ಊರು ಅಷ್ಟು ಹಳ್ಳಿಯಾದರೆ! ಗಂಡಸರಿಗಿದೊಂದೂ ಅರ್ಥವಾಗೋದಿಲ್ಲ....ಚಂಚೂ! ನಿನ್ನ ಆಸ್ಪತ್ರೆಯಲ್ಲಿ ಮಲಗಿಸಿಕೊಂಡು ಈ ಹುಡುಗಿ ದುರಹಂಕಾರಕ್ಕೆ ಏನಾದರೂ ಔಷಧಿ ಇದ್ದರೆ ಕೊಟ್ಟು ವಾಸಿ ಮಾಡು" ಎಂದು ಒಟಗುಟ್ಟುತ್ತ, ಸರಸಮ್ಮ ಸರಕ್ಕನೆ ಒಳಕ್ಕೆ ಹೊರಟೇ ಹೋದಳು....ಹೊರಗಡೆ ಒಂದು ಜಟಕದ ಸದ್ದಾಯಿತು....ನಾಗರಾಜ ಓಡಿ ಹೋಗಿ ಅದನ್ನು ಗೊತ್ತುಮಾಡಿ, ಚಂಚುಚಿಕ್ಕಮ್ಮನ ಕಣ್ಣಸನ್ನೆಯನ್ನೂ ಗೌರವಿಸದೆ, ನೀರಜಳನ್ನೂ ಕೂರಿಸಿಕೊಂಡು, ಗಾಡಿಬಿಟ್ಟ!

ಆಗ, ರಾಯರು ಎದ್ದು ಕೂತರು. ಅವರ ಹೆಕ್ಕತ್ತಿಗೂ ಸೊಂಟಕ್ಕೂ ಪೂರ ನೋವು ಅಂಟಿಕೊಂಡುಬಿಟ್ಟಿತ್ತು. ಮನಸ್ಸಿನಮೇಲೂ ಗಾಯ! ಒಬ್ಬನೇ ಒಬ್ಬ ಮಗ, ಮಾನಾಪಮಾನಕ್ಕೆಲ್ಲ ಏಕಮಾತ್ರದ ಆಶ್ರಯ, ಮಹೋಬ್ಬು ಅಂತ ಒಬ್ಬ ಇದ್ದ ಜಗತ್ತಿನಲ್ಲಿ ಅಂತ ಭಾವೀ ಜಗತ್ತಿಗೆ ಸಾರಲು ಸಾಧಕವಾಗಿರುವ ತನ್ನ ಒಂದೇ ಒಂದು ಅಂಶ, ಅದಕ್ಕೆ ಅನ್ನವಿಕ್ಕಲಾರದಂತಾದೆ ನಲ್ಲಾ, ಎಂದು ಅವರು ತಲೆಯಮೇಲೆ ಕೈ ಇಟ್ಟರು. ಆಗ, ಅಲ್ಲೂ, ಮೈ ಭಾರದ ಒತ್ತಡದಿಂದ, ಮುಟ್ಟಿದರೆ ಉರಿ ಹುಟ್ಟುತ್ತಿ, ಎಂಬುದು ರಾಯರಿಗೆ ತಿಳಿಯಿತು....ಯೋಗಾಸನಕ್ಕಿಂತ ವಾಕಿಂಗ್ ಹೋಗುವುದೇ ಕ್ಷೇಮ; ಆಗ, ಸೊಂಟವೂ ನೆಟ್ಟಗಾಗುವುದು; ಬುರುಡೆಗಿಳಿದಿರುವ ರಕ್ತವೆಲ್ಲ ಹಿಂಗಾಲು ಅಂಗಾಲುಗಳಿಗೆ ಹರಿದು ರಕ್ತಚಲನೆಯೂ ಸಮರ್ಪಕವಾಗುತ್ತದೆ; ಮೂಗರ ಳಿಸಿ ಹತ್ತು ಹೆಜ್ಜೆಗೊಂದು ಸಲದಂತೆ ತಂಗಾಳಿ ಹೀರಿದರೆ, ಎದೆ ಉಬ್ಬಿ ಶ್ವಾಸ ಕೋಶ ವಿಕಾಸಹೊಂದಿ, ಮೈಗೆ ಲವಲವಿಕೆ ಉಕ್ಕಿಬರುತ್ತದೆ;—ಎಂದೆಲ್ಲ ಚಂಚು ರಾಯರಿಗೆ ಉಪನ್ಯಾಸಕೊಟ್ಟಳು. "ಸಾಕು, ಮಹರಾಯಿತಿ! ಏಳುತ್ತೇನೆ, ಇಲ್ಲಿಂದ" ಎಂದು ಹೇಳುತ್ತ, ರಾಯರು, ಕೋಲನ್ನೇ ಗೆಳೆಯ ನಾಗಿ ಸಂಗಡ ಕರೆದು, ಮನೆಯಿಂದ ಹೊರಟು ರಸ್ತೆಯ ಎಡದ ಮಗ್ಗುಲನ್ನೇ ಅವಲಂಬಿಸಿ ಮುಂದುವರಿದರು.

ಅವರ ಹೆಜ್ಜೆಗಳು ಕಿಂಕರಪುರ ದಾಟಿ ಹಸುವಿನಗುಡಿಗೆ ನುಗ್ಗಿದುವು. ಹಾಗೆಯೇ, 'ನಿದ್ದೆಯ ಲೋಕದಿ ಕನಸಿನ ಬೀದಿ' ಯಲ್ಲಿ ತತ್ತರಿಸುತ್ತ, ಆಕಾಶ

ದಲ್ಲಿ ತಲೆಯನ್ನು ತೇಲಿಸಿ ಪಾತಾಳದಲ್ಲಿ ಕಾಲನ್ನು ಅದ್ದಿ ಕಂಗೆಟ್ಟ ಕಪಿಯಂತೆ ಅವರು ತಾರಾಡಿ ತೂರಾಡಿ ಭಾವನ ಮನೆಯೊಳಕ್ಕೆ ನುಗ್ಗಿದರು. ಭಾವ ಕೂಡ, ಆಗತಾನೆ ತಲೆಗೆ ರುಮಾಲೇರಿಸಿ ಕೊಂಕುಳಲ್ಲಿ ದೊಣ್ಣೆ ತುರುಕಿ ಹೊಸಲಿಂದಾಚೆ ಕಾಲಿಡುವುದರಲ್ಲಿದ್ದ. "ಬಾ! ಬಾ! ಮಹೋಬ್ಬೂ! ಬಾ!" ಎನ್ನುತ್ತ, ಶೀನಪ್ಪ ರಾಯರ ಎರಡು ತೋಳುಗಳನ್ನೂ ಹಿಡಿದು ಜಗ್ಗಿಸಿ ಅವರನ್ನು ಸದ್ಯದ ಗದ್ಯ ಲೋಕಕ್ಕಿಳಿಸಿ ಕುರ್ಚಿಯೊಂದನ್ನು ತೋರಿಸಿದ. "ನನಗೆಲ್ಲ ವೇದ್ಯವಾಯಿತು! ಒಟ್ಟಿನಲ್ಲಿ, ನಿನ್ನ ಬೆನ್ನುಮೂಳೆಗೆ ಬಲ ಸಾಲದು," ಎನ್ನುತ್ತ, ಅವರ ಉಲ್ಲನ್ ಕತ್ತುಪಟ್ಟಿಯನ್ನು ಸರಿಪಡಿಸಿ ಬಿಗಿದ.

"ಛೆ! ಛೆ! ಅದರಿಂದಲ್ಲ ಹಾಗಾದದ್ದು, ಅಭ್ಯಾಸ ಸಾಲದು, ಅಷ್ಟೆ" ಎಂದು, ಅವರು ಭಾವನ ಕೈಯನ್ನು ಹಿಡಿದು ಕೊಡವಿ ಪಟ್ಟಿಯನ್ನು ಸಡಿಲಿಸಿದರು. "ಅಭ್ಯಾಸವೇನಯ್ಯ, ಇದಕ್ಕೆ? ಇಷ್ಟು ವರ್ಷ ಅದರ ಕಡೆ ಗಮನವೇ ಕೊಡದೆ, ಬೇಕಾಪಟ್ಟೆ ಬೆಳೆಯುವಂತೆ ಬಾಯಿಮುಚ್ಚಿಕೊಂಡಿದ್ದು...." ಎಂಬ ಭಾವನ ದೂಷಣೆಯನ್ನು ಅರ್ಧದಲ್ಲೇ ನಿಲ್ಲಿಸಿ, "ಒಳ್ಳೇ ಚೆನ್ನಾಯಿತಲ್ಲಾ! ಹೊಟ್ಟೆಪಾಡಿಗೆ ಅಂತ ದುಡಿಯುವವನಿಗೆ ಹೊಟ್ಟೆ ಉಬ್ಬರ ಇಳಿಸಬೇಕು ಅಂತ ಎಲ್ಲಿ ಜ್ಞಾನ ಇರುತ್ತೆ ಹೇಳು!" ಎಂದರು, ರಾಯರು.

ಶೀನಪ್ಪನಿಗೆ ರೇಗಿತು. "ಅಲ್ಲ ಕಣಯ್ಯ! ನೀನು ಹೇಳುತ್ತಿರುವುದು ನಿನ್ನ ಹಠಯೋಗದ ವಿಷಯ; ನಾನು ಹೇಳುವುದು ನಿನ್ನ ಹೆಂಡತಿ ಹಠದ ವಿಷಯ....ನಾಗರಾಜ ಬಂದು ಹೇಳಿದ, ಎಲ್ಲವನ್ನೂ! ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೇ ಪಕ್ಕೆ ಹಿಡಿದುಕೊಂಡು ನಮ್ಮನ್ನು ನೋಡಿ ನಗುವಷ್ಟು ನಿರ್ವೀರ್ಯರಾಗಿಬಿಟ್ಟರೆ ನಾವು....ಥೂ, ಥೂ....ಥು! ಅಷ್ಟೊಂದು ಅಸ್ತವ್ಯಸ್ತ ನಿನ್ನ ಸುತ್ತ ನಡೆಯುತ್ತಿದ್ದಾಗಲೂ, ನೀನು ಕ್ಷೀರಸಾಗರಶಯನನಹಾಗೆ, ವಟಪತ್ರದ ಮೇಲೆ, ಹೆಬ್ಬೆಟ್ಟು ಚೀಪುತ್ತ ಬಿದ್ದಿದ್ದೆಯಂತಲ್ಲಾ!....ನಾಚಿಕೆಗೇಡು...." ಎಂದು ಶೀನಪ್ಪ ಹೀಯಾಳಿಸಿದ.

ರಾಯರು ತಕ್ಷಣವೇ ಎದ್ದು ಗೇಟಿನ ಕಡೆಗೆ ನಡೆದರು! "ಹಾಗಲ್ಲ ಕಣೊ!" "ಇಲ್ಲಿ ಕೇಳೋ ಇಲ್ಲಿ!" ಮಹೋಬ್ಬು! "ಮಹೋಬ್ಬು!! ನಿನ್ನ ಅಭ್ಯುದಯಕ್ಕೇನೆ ನಾನು ಹೇಳಿದ್ದು" "ಈಗಲೂ ಹೊತ್ತು ಮೀರಿಲ್ಲ; ಹತೋಟಿಗೆ ತರಬಹುದು, ನಾನು ಹೇಳಿಕೊಡುತ್ತೇನೆ, ಉಪಾಯಾನ" ಎಂದು ಕೂಗಿಕೊಂಡೇ ಶೀನಪ್ಪನೂ ರಾಯರ ಹಿಂದೆ ಓಡಿದ.

# ಆಸ್ಪತ್ರೆ

ಜಟಕ ಎಂಬ ಕಠೋರ ಶಕಟದಲ್ಲಿ ನೀರಜಳನ್ನು ಕೂರಿಸಿದ, ನಾಗರಾಜ. ದಾರಿಯಲ್ಲಿ ಅವನಿಗೆ ಕಾಣಿಸಿದ ಮೊದಲನೆಯ ಅಂಗಡಿಯಿಂದ ಸಿಗರೇಟು ಕೊಂಡು ಹಚ್ಚಿ ಬಾಯಿಗಿಟ್ಟಾಗ ನಾಗರಾಜನ ಕೋಪ ಅರ್ಧಕ್ಕರ್ಧ ಶಮನವಾಯಿತು. ಆದರೆ, ಉಳಿದರ್ಧ, ಹನ್ನೆರಡಾಣೆಯಷ್ಟಕ್ಕಿಂತ, ಏನೂ ಕಡಮೆ ಇರಲಿಲ್ಲ. ಅದನ್ನು ವೆಚ್ಚಮಾಡಲು ಅವನು ನೀರಜಳಮೇಲೆ ಕಿಡಿಕಾರಿದ. ಶಂಖವಾದ್ಯದ ಮುಷ್ಕರ, ಕರೀಸ್ವಾಮಿಯ ಕೆಟ್ಟ ನುಡಿ, ಅಪ್ಪನ ಯೋಗಾಸನ, ಅಮ್ಮನ ಆರ್ಭಟ, ಎಲ್ಲವೂ ಅವನ ತಲೆಯನ್ನು ತೀರ ಕೆಡಿಸಿತ್ತು. ದಾರಿ ಉದ್ದಕ್ಕೂ "ನಾನು ನಿನಗೆ ಹೇಳಿದ್ದೇನು? ನೀನು ಅಲ್ಲಿ ಬುಸುಗುಟ್ಟಿದ್ದೇನು? ಹತ್ತಾರು ಮಾತು ಮುಗಿದಮೇಲೆ, ಸರದಿ ಬಂದಾಗ, ನಿನ್ನ ನೀರು ಗೀರು ವಿಚಾರಿಸಿದನಂತರ ತಿಂಗಳು ತಿಂಗಳಿಗೂ ಬೊಂಬಾಯಲ್ಲಿ ಹೆಣ್ಣು ಡಾಕ್ಟರನ್ನು ಭೇಟಿಯಾಗುತ್ತಿದ್ದೆವು ಎಂದು ತಿಳಿಸಿದಮೇಲೆ, ಹೂವಿನಲ್ಲೇ ಹಿಂದೆ ಬಾಡಿ ಉದುರಿದ ಮಗುವಿನ ಪ್ರಸ್ತಾಪ ಬಂದರೆ, ಇದನ್ನಾದರೂ ಉಳಿಸಿಕೊಡಿ, ಅತ್ತೆಮ್ಮನವರೇ, ಆಶೀರ್ವಾದಮಾಡಿ, ಅಂತಲ್ಲವೆ ನಾನು ಪಾಠಮಾಡಿಸಿದ್ದು? ಮದ್ದು ತುಂಬುವ ಮೊದಲೇ ಫಿರಂಗಿ ಹಾರಿಸಿದರು, ಎಂಬುವಹಾಗೆ ನೀನು ಹಿಂದುಸ್ತಾನಿ ಗಜಲನ್ನ ನಾಂದಿ ಅಂತ ನಾಟೇಲೇ ಹೊಡೆದುಬಿಡೋದೇ" ಎಂದು ಅವನು ನೀರಜಳೆದುರು ದಂಷ್ಟ್ರ ಪ್ರದರ್ಶಿಸಿದ.

ನೀರಜಳಿಗೆ ಬಹು ಸಂಕಟವಾಯಿತು. ಅವಳ ಕಣ್ಣು ಕಪ್ಪು ಕಟ್ಟಿತು ಹಣೆಯ ಮೇಲೆ ಬೆವರ ಹನಿಗಳೆದ್ದುವು ತುಟಿಗಳು ಒಣಗಿ ಒಡೆದವು. ಹಲ್ಲುಗಳು ಕಟಕಟಿಸಿದುವು. ಬಲವಾದ ಬಿಕ್ಕಳಿಕೆಯಿಂದ ಅವಳು ತಬ್ಬಿಬ್ಬಾದಳು. "ಅಯ್ಯೋ! ಅಯ್ಯೋ! ತಲೆ ಸುತ್ತುತ್ತೆ!" ಎಂದು ಅವಳು ಗಾಡಿ ಹುಲ್ಲಿನ ಮೇಲೆಯೇ ಮಲಗಲು ಪ್ರಯತ್ನಿಸಿದಳು. ನಾಗರಾಜ ಅವಳನ್ನು ಹಿಡಿದು ತನ್ನ ಎದೆಯಮೇಲೊರಗಿಸಿಕೊಂಡು ಹಣೆಯನ್ನು ಮೆಲ್ಲ ಮೆಲ್ಲನೆ ಸವರಲಾರಂಭಿಸಿದ "ಏನೇ! ಏನಾಗುತ್ತಿದೆ, ನೀರೀ!" ಎಂದು ನಿಮಿಷ ನಿಮಿಷಕ್ಕೂ ಕೇಳುತ್ತಲೇ ಇದ್ದ. "ಜೀ! ರಾಷ್ಟ್ರೀಯ ಚಿಕಿತ್ಸಾಲಯಕ್ಕೆ

ಜಾವುಜಿ, ಅಮ್ಮಾಕೆ ಪೇಟ್ ಹುಷಾರಿ ನೈಜೀ!" ಎಂದು ಜಟಕಾದವನು ಹೇಳಿದ.

ದಾರಿಯಲ್ಲಿ ಒಂದು ನಿಮಿಷ ಕೆಳಗಿಳಿದು ಶೀನಪ್ಪನಿಗೆ ಸುದ್ದಿ ಮುಟ್ಟಿಸಿದ. ಶೀನಪ್ಪನ ಒಂದು ನಿಮಿಷ ಅಂದರೆ, ಹತ್ತು ನಿಮಿಷದ ಹರಟೆ! ಅಲ್ಲಾದ ಕಾಲವ್ಯಯದ ತಪ್ಪಿಗಾಗಿ, ಆ ಕುದುರೆ ಬಾಲವನ್ನು ಮೂರು ನಾಲ್ಕು ಬಾರಿ ಹಿಡಿದು ತಿರುಚಬೇಕಾಗಿ ಬಂತು. ಗಾಡಿ ವೇಗವಾಗಿ ಹೋದರೆ, ಒಳಗಿರುವವರಿಗೆ ತಳಮಳ; ನಿಧಾನವಾಗಿ ಹೋದರೆ, ನಡುಮಧ್ಯೆ ಏನಾಗುವುದೋ, ಎಂಬ ಭಯ! ಹಾಗೂ ಹೀಗೂ, ಆಸ್ಪತ್ರೆ ಬಂತು. ಅಲ್ಲೀ, ಬಾಗಿಲಲ್ಲೀ, ಕರೀಸ್ವಾಮಿಗಳು ಗಣಪನಹಾಗೆ ಕುಳಿತಿದ್ದರು. ಅವರನ್ನು ನೋಡದವನಂತೆ ನಾಗರಾಜ ನೀರಜಳನ್ನು ನಡೆಸುತ್ತ ಒಳಕ್ಕೆ ಪ್ರವೇಶಿಸಿದ. ಆದರೆ, ಅವರದು ದಿವ್ಯ ಚಕ್ಷುಸ್ಸಲ್ಲವೆ? ಪತ್ತೆ ಹಿಡಿದೇ ಬಿಟ್ಟರು. 'ಶುಭಮಸ್ತು! ಶುಭಮಸ್ತು!' ಎಂದು ಕುಳಿತ ತಾಣದಿಂದಲೇ ವರದಹಸ್ತವನ್ನು ದಂಪತಿಗಳ ಕಡೆ ನೀಡಿದರು. ತಕ್ಷಣವೇ ನೀರಜಳಿಗೊಂದು ಹಾಸಿಗೆ ಸಿದ್ಧಪಡಿಸಿದರು. ನಾಗರಾಜನನ್ನು ಹೊರಗಿರುವಂತೆ ಬಿನ್ನವಿಸಿದರು. ಕೆಲ ಕೆಲನೆ ಕೆಲ ನರಸುಗಳು ಸರಸ ಸೊಲ್ಲಾಪ ಮಾಡುತ್ತ ಓಡಿಬಂದು ಅವಳನ್ನು ಪರೀಕ್ಷಿಸಿ ಕಾವು ಹಿಡಿದು ನಾಡಿ ಎಣಿಸಿದರು. ಅಷ್ಟರೊಳಗೆ ಚಂಚು ಚಿಕ್ಕಮ್ಮನೂ ಅಲ್ಲಿಗೆ ಬಂದಳು...." ಹೆರಿಗೆಗಿನ್ನೂ ಒಂದು ವಾರವಾಗಬಹುದು, ನಾಗರಾಜ! ಅವಳು ಇಲ್ಲೀ ಇರಲಿ! ಏನೂ ಭಯವಿಲ್ಲ" ಎಂದು ಗಂಡನಿಗೆ ಆಶ್ವಾಸನವಿತ್ತಳು.

ಆಗ, "ಇವರೇನೋ, ನಿಮ್ಮ ಡಾಕ್ಟರ್ ಚಿಕ್ಕಮ್ಮ?" ಎಂದು ನಾಗರಾಜನನ್ನು ಕೇಳುತ್ತ ಅವರಿಬ್ಬರ ನಡುವೆ ಕರೀಸ್ವಾಮಿಗಳು ಕೈ ಜೋಡಿಸಿದರು. "ನಾನೊಬ್ಬ ಯಃಕಶ್ಚಿದಾನಂದ! ನನ್ನ ಕಾಷಾಯವೂ ಒಂದು ತೆರನ ಕಷಾಯವೇ! ತರತರದ ವೈದ್ಯರುಂಟಲ್ಲಾ, ಜಗತ್ತಿನಲ್ಲಿ! ನಾಗರಾಜ ಬಲ್ಲ, ನನ್ನ ಮಂತ್ರ ತಂತ್ರಗಳನ್ನೆಲ್ಲ....ನಿಮ್ಮ ಈ ಸಂಸ್ಥೆಯನ್ನು ಕಣ್ಣಾರ ನೋಡಬೇಕೆಂಬ ಪ್ರೇರಣೆ ಆಯಿತು, ಬೆಳಗ್ಗೆ! ಯಾಕಾಯಿತೋ, ಏನೋ? ನಿಮ್ಮ ಕಾಲಸ್ಥಿತಿ ಚೆನ್ನಿಲ್ಲ ಅಂತ ಕೇಳಿದ್ದರಿಂದಲೋ, ಏನೊ?" ಎಂದು ಕೈಗಳನ್ನು ಅಗಲಿಸಿ, ಕೆಳಕ್ಕಿಳಿಸಿದರು.

ಸ್ವಾಮಿಗಳು ಎಂದರೆ ಒಂಟಿ ಆನೆ ಚಾಮರ ಪಾಮರ ಶಿಷ್ಯ ಮಂಡಳಿ ಇತ್ಯಾದಿ ಪರಿಕರಗಳೂ ಪಂಚ ಮಹಾಶಬ್ದಗಳೂ ಸಂಗಡಲೇ ಇರುತ್ತವೆ ಎಂದು ಚಂಚು ಊಹಿಸಿದ್ದಳು. ಗುರುಗಳ ಪೂರ್ವಾಶ್ರಮ ವಿವರಗಳನ್ನೂ ಅವರ ತಪೋಬಲದಿಂದ ಶಿಷ್ಯಕೋಟಿಗಾಗುವ ಮಹೋಪಕಾರಗಳನ್ನೂ ಸ್ವಾರಸ್ಯ ವಾಗಿ ವಿವರಿಸಿ ಹಣ ವಸೂಲಿಮಾಡಲು ಒಬ್ಬ ಶಿಷ್ಯ ಕೂಡ ಇಲ್ಲದೆ, ಒಂಟಿ ಸಲಗನಂತೆ ತಿರುಗುತ್ತಿದ್ದ ಕರೀಸ್ವಾಮಿಗಳನ್ನು ನೋಡಿ ಚಂಚು ನಡುಗಿದಳು. ಗೊಂಡಾರಣ್ಯದಲ್ಲಿ ಎಲೆಮನೆ ಜೋಡಿಸಿಕೊಂಡು, ಹುಲಿಗೂ ಆಡಿಗೂ ಒಂದೇ ಪಾತ್ರೆಯಿಂದ ಒಂದೇ ಸಮಯದಲ್ಲಿ ತವುಡು ತಿನ್ನಿಸುವ ಸರ್ಕಸ್ ಸಾಹಸ ಮಾಡುವುದನ್ನು ಬಿಟ್ಟು, ಇವರೇಕೆ ಹಸುವಿನಗುಡಿಯೊಳಗಿರುವ ಬಡ ಚಿಕಿತ್ಸಾಲಯಕ್ಕೆ ಬರಲು ಪ್ರೇರಿತರಾದರು? ಇದರ ಒಳಗುಟ್ಟೇನು? ಎಂದು ಚಂಚು ಅರ್ಧ ನಿಮಿಷ ಯೋಚಿಸಿದಳು. ಬಗೆಹರಿಯಲಿಲ್ಲ "ಬನ್ನಿ! ಒಳಗೆ" ಎಂದು ಅವಳು ತನ್ನ ರೂಮಿನ ಕಡೆಗೆ ಸ್ಟೆಥಸ್ಕೋಪನ್ನು ಬೀಸಿದಳು.

ನಾಗರಾಜ ಹೊರಗಡೆಯ ಒರಗುಬೆಂಚಿನ ಮೇಲೆ ಒಬ್ಬನೇ ಕುಳಿತು ಕಣ್ಣುಮುಚ್ಚಿಕೊಂಡು ಸಿಗರೇಟು ಸೇದುತ್ತಿದ್ದ. ಅರ್ಧಂಗುಲದಷ್ಟು ಉದ್ದದ ಕಡ್ಡಿ ಸುಡುವಷ್ಟು ಹೀರಿದನಂತರ, ಅವನು ಆ ತಂಬಾಕಿನ ಹೊಗೆಯನ್ನು ಬಾಯ್ತುಂಬ ತುಂಬಿ ಹಿಡಿದು ಅದರೊಳಗೆಲ್ಲ ನಾಲಗೆಯಾಡಿಸಿ ಸವಿದು, ಅನಂತರ ಮೆಲ್ಲಗೆ ಮೂಗಿನ ಹೊಳ್ಳೆಗಳ ಮೂಲಕ ಅಂತರಿಕ್ಷದಲ್ಲಿ ಮರಿ ಮೋಡಗಳನ್ನು ರಚನೆಮಾಡುತ್ತಿದ್ದ. ಆಗ, ಶಂಖವಾದ್ಯದ ಸದ್ಯಸ್ಥಿತಿಯ ಕಡೆ ಅವನ ಮೆದುಳು ಹರಿಯಿತು. ತನ್ನ ಜಾತಕದಲ್ಲೂ ನೀರಜಳ ಜಾತಕ ದಲ್ಲೂ ದಾರುಣಯೋಗವಿದ್ದರೂ, ಮುಂದಿನ ವಾರ ಅವತಾರ ಮಾಡುವ ಕೂಸಿನ ಭವಿಷ್ಯವಾದರೂ ನೆಟ್ಟಗಿದ್ದು, ಶಂಖವಾದ್ಯ ಮತ್ತೆ ಮೊಳಗಿ ತನ್ನ ಎದೆಗೆ ಗಾಳಿ ಸಿಗುವಂತಾಗಲಿ, ಎಂದು ಅವನು ಉಸಿರೆಳೆದ. ಶಂಖದಿಂದ ಬಂದದ್ದೆಲ್ಲ ತೀರ್ಥ ಎಂದು ನಂಬಿ, ದಿನವೂ ಅದರ ಒಂದು ಗುಟುಕನ್ನು ಸೇವನೆ ಮಾಡುತ್ತಿದ್ದ ವಾಚಕ ಸಮೂಹಕ್ಕೆ ಅಶ್ಲೀಲಾಸಕ್ತನಾದ ಕಂಪೋಸಿಟರೊಬ್ಬನ ಕುಬುದ್ಧಿಯಿಂದ ಕೊಚ್ಚೆ ದೊರೆಯುತ್ತಿತ್ತಲ್ಲಾ, ಎಂದು ನೆನೆದು ಅವನು ಕಿರುನಗೆ ಬೀರಿದ. ಮುಷ್ಕರ ಹೂಡಿರುವವರ ಮೂಗು ಮುರಿಯಲು ಶಂಖ ವಾದ್ಯದ ಮಾಲೀಕರು ಅದನ್ನು ಒಳ್ಳೆ ಸಭ್ಯರಾದವರು ಯಾರಿಗಾದರೂ

ಮಾರುವ ಯೋಚನೆಯನ್ನೂ ಕೂಡ ಇಟ್ಟುಕೊಂಡಿರುವರೆಂದು ಶೀನಪ್ಪನವರು ಹೇಳಿದ್ದರು. ಅದನ್ನು ಅವರು ತಿಳಿಸಿದಾಗ ಅವರ ಮುಖದಲ್ಲಿ ಒಂದು ಹೊಸ ಬಗೆಯ ನಲಿದಾಟ ಕಂಡುಬಂತು. ಅದರ ಒಳಗುಟ್ಟೇನು? ಶೀನಪ್ಪನವರೇ ಕೊಂಡುಕೊಳ್ಳುತ್ತಾರೆಯೇ? "ನನ್ನ ಮೂಲಕ ಆ ಪತ್ರಿಕೆಯನ್ನು ನಡೆಯಿಸು ತ್ತಾರೆಯೆ? ಅಪ್ಪನ ಹತ್ತಿರ ಹಣವಿದ್ದರೂ, ಅವರ ಕಿವಿಗೆ ಇದು ಕರ್ಕ ಶವೋ, ಏನೊ? ಓ! ಅಮ್ಮನಿಗೆ ಇಷ್ಟವಾಗದಿದ್ದರೆ? ನನ್ನ ಪರ, ಚಂಚು ಏನಾದರೂ ಭಾವನಲ್ಲಿ ವಕಾಲತ್ ವಹಿಸಿರಬಹುದೆ?....ಸ್ವಂತದ್ದೊಂದು ಪೇಪರು, ಏನಾದರೂ ಮಾಡಿಕೊ ಅಂತ ನನ್ನ ಕೈಗೆ ಸಿಕ್ಕಿದರೆ, ಸಿಗಿದು ಹಾಕಿಬಿಟ್ಟೇನು, ಚೂರು ಚೂರಾಗಿ...."

"ಲೋ! ಎಲ್ಲಾ ಕ್ಷೇಮತಾನೆ?" ಎಂಬ ಪ್ರಶ್ನೆ! ಕಣ್ಣು ತೆರೆದರೆ ತಂದೆ! ಪಕ್ಕದಲ್ಲೇ ಭಾವ!

* * * *

ಭಾವನ ಮನೆಯಿಂದ ಚಿಕಿತ್ಸಾಲಯದವರೆಗೂ ಇಬ್ಬರೂ ಕೈಬೀಸಿ ಕೊಂಡು ಕಣ್ಣುರುಳಿಸಿಕೊಂಡು ತೀವ್ರ ಚರ್ಚೆಮಾಡುತ್ತಲೇ ಬಂದರು. "ಹೆಂಗಸರ ವ್ಯಾಜ್ಯಕ್ಕೆ ಗಂಡಸರೇ ತೀರ್ಪು ಕೊಡಬೇಕು; ನಿನ್ನ ಅಕ್ಕನಿಗಿದ್ದ ಪೌರುಷ ನಿನಗಿಲ್ಲವಲ್ಲೋ; ಚಂಚೂನ ನೋಡಾದರೂ ಕಲಿತುಕೊ; ಮಗನನ್ನ ಮತ್ತೆ ರೈಲು ಹತ್ತಿಸಬಾರದು; ತಂದೆತಾಯ್ಗಳ ಪೋಷಣೆಯಲ್ಲಿರು ವುದೇ ಅವನಿಗೆ ಭೂಷಣ, ನೀನೂ ಕೂಡ ಟೈರೊಳಗಿನ ಟ್ಯೂಬಿನಹಾಗೆ ಬಿಂ ಅಂತ ಮನೆಯಲ್ಲಿ ಭರ್ತಿ ಗಾಳಿ ತುಂಬಿಕೊಂಡು ಕೂತಿರಬಾರದು; ಯಾವುದಾದರೂ ಚಾಕರಿಗೆ ಸೇರಿಕೊ; ನೀನು ಕೆಲಸಕ್ಕೆ ನುಗ್ಗಿದರೆ, ಚಿಕ್ಕ ವಯಸ್ಸಿನವನೊಬ್ಬನ ಬಾಯ್ಗೆ ಮಣ್ಣು ಬೀಳುತ್ತೆ, ಸರಿ; ಆದರೆ, ಏನು ಮಾಡುವುದು, ಕಳಚಿಟ್ಟ ಜೀನೀಸನ್ನು ತೊಡದೆ ಇದ್ದರೆ ಬೆತ್ತಲೆ, ಬೇಜಾರು!" ಎಂದೆಲ್ಲ ಭಾವ ವಾದಿಸಿದ. "ಹೆಂಡತಿಯ ಅಧೀನರಾಗಿ ಬಾಳುವುದೇ ಗಂಡಸರಿಗೆ ಅನುಕೂಲ; ಸಂಸಾರದಲ್ಲಿ ಬರುವ ಸಮಸ್ಯೆಗಳನ್ನೆಲ್ಲ ಬಿಡಿಸುವ ಹೊಣೆಗಾರಿಕೆ ಗಂಡಸರಿಗೇಕೆ; ಹೆಣ್ಣು ಅದಕ್ಕಾಗಿಯೇ ಹುಟ್ಟಿ ಅದಕ್ಕಾಗಿಯೇ ಶಿಕ್ಷಣ ಹೊಂದಿದೆ. ಅವಳೇ ಗಂಡನ ಕೈಹಿಡಿದು ನಡೆಸಲು ಸಮರ್ಥಳಾದ ಪ್ರಾಣಿ; ಸರಸು ಕೂಡ....ಒಳ್ಳೇ ವಜ್ರದ ಹರಳು. ಅವಳ ಇಷ್ಟದಂತೆ ನಾನೂ ನಡೆದು

ಬಿಟ್ಟರೆ, ಅವಳು ಬಲು ಸಾಧು; ಕಾಲೇಜಿನಲ್ಲಿದ್ದಾಗಿನಿಂದ ನನ್ನ ಹೃದಯ ವೇನೋ ದೇಶ, ಸಮಾಜ, ಅಂತ ಮಿಡಿಯುತ್ತಲೇ ಇದೆ. ಮನೆ ಅಂದರೆ ಮೊದಲಿನಿಂದಲೂ ನನಗೆ ಸೆರೆಮನೇನೆ! ರಾಮಯ್ಯಂಗಾರಿ ಗೊತ್ತಿಲ್ಲವೆ, ನಿನಗೆ! ಮನೆಗೆ ಬರುತ್ತಿದ್ದನಲ್ಲಾ!....ಅವನೂ ನಾನೂ, ಸಮಾಜ ಸೇವೆ ಸಮಾಜ ಸೇವೆ ಅಂತ ಎಷ್ಟು ದಿನ ಚರ್ಚೆಮಾಡಿದೇವೆ, ಗೊತ್ತೆ! ನಾನೇ ಅವ ನಿಗೆ ಆಮೇಲೆ ಭಂಡಾರ್ಕರ್ ವಿಳಾಸ ಕೊಟ್ಟುಕಳುಹಿಸಿದೆ, ಹೋಗಿ ನಡೆಸು, ನಿನ್ನ ಕೈಲಾದದ್ದು, ಅಂತ!....ಆಗಲೇ ನಾನೂ ಹೊರಟುಬಿಟ್ಟಿದ್ದರೆ, ಈ ಚಿಕಿತ್ಸಾಲಯದಹಾಗೆ ನೂರಾರು....ದೇಶದ ಮೂಲೆ ಮೂಲೆಯಲ್ಲೂ.... ಥಳ ಥಳಿಸುತ್ತಾ...."

ರಾಯರನ್ನು ಆಸ್ಪತ್ರೆಗೆ ಕರೆತರಬೇಕೆಂಬುದು ಭಾವನವರ ಉದ್ದೇಶ ವಾಗಿರಲಿಲ್ಲ. 'ಈ ಚಿಕಿತ್ಸಾಲಯ' ಎಂದು ಅವರು ಅತ್ತಕಡೆ ಕೈನೀಡಿದಾಗಲೇ ಭಾವನಿಗೆ ಬೆಳಕು. ಹೊಗೆಯ ಕೆಳಗೆ ಕೂತು ಕನಸು ಕಾಣುತ್ತಿದ್ದ ನಾಗ ರಾಜ ರಸ್ತೆಯಿಂದಲೇ ಅವರಿಗೆ ದರ್ಶನಕೊಟ್ಟ. ಅವನನ್ನು ಮಾತನಾಡಿಸಿ, ಇಬ್ಬರೂ ಚಂಚು ರೂಮನ್ನು ಪ್ರವೇಶಿ....? ಪ್ರವೇಶಿಸಲಾಗದೆ, ರಾಯರು ಬಾಗಿಲಲ್ಲೇ ನಿಂತರು! 'ರಾಂ' ಎಂಬ ಶಬ್ದ ಅವರ ತುಟಿಮೀರಿ ಸಿಡಿಯು ವುದರೊಳಗೆ ಕರೀಸ್ವಾಮಿಗಳೇ ಎದ್ದು, ಅವರ ಸಮೀಪಕ್ಕೆ ಓಡಿಬಂದರು. ಅವರನ್ನೂ ಎಳೆದುಕೊಂಡು ಸ್ವಾಮಿಗಳು ಒಂದು ಚಿಕ್ಕ ಕೋಣೆಯೊಳಕ್ಕೆ ನುಗ್ಗಿದರು. ಇದೇನಿದು ಅನಾಹುತ, ಈ ಸಂನ್ಯಾಸಿಗೆ ಏನಾಗಿದೆ, ಎಂದು ಹುಬ್ಬು ಏರಿಸುತ್ತ ಚಂಚುವೂ ಅವಳ ಹಿಂದೆ ಭಾವನೂ ಅಲ್ಲಿಗೆ ಓಡೋಡಿಬಂದರು. ಭಾವ ರಾಯರು, ಇಬ್ಬರೂ, ರಾಮಯ್ಯಂಗಾರೀ, ಎಂದು ಒಂದೇ ಧ್ವನಿಯಲ್ಲಿ ಸ್ವಾಮಿಗಳ ಇತಿಹಾಸವನ್ನು ಬಯಲಿಗೆಳೆದರು. "ಹೌದಪ್ಪ, ಹೌದು! ಕೂಗಬೇಡ! ಬಾ! ಅಲ್ಲಿಗೇ ಹೋಗೋಣ" ಅಂತ, ಸ್ವಾಮಿಗಳು ಎದ್ದು ದೊಡ್ಡ ರೂಮಿನ ಕಡೆ ದೌಡಾಯಿಸಿದರು....ನಾಗರಾಜ ಸೇದುಕಡ್ಡಿಯ ಸುಖದಲ್ಲೇ ಸೇರಿಹೋಗಿದ್ದ.

ರಾಮಯ್ಯಂಗಾರಿ ಪಕ್ಕದಲ್ಲಿ ಕುಳಿತಾಗಲೇ, ರಾಯರ ವಯಸ್ಸು ಇಪ್ಪತ್ತು ಇಪ್ಪತ್ತೆರಡಕ್ಕಿಳಿಯಿತು. ಶೀನಪ್ಪನೂ ಕೂಡ ನವಚೇತನದ ತರುಣನಾದ. ಅವರ ಮಾತುಕಥೆ ಕೇಳುತ್ತ ಸ್ವಾಮಿಗಳೆದುರು ಚಂಚು ಬಹಳ ಹೊತ್ತು

ತುಟಿ ತೆರೆದು ಕೂತಿದ್ದಳು. ಇಪ್ಪತ್ತೈದು ಇಪ್ಪತ್ತೆಂಟು ಸಂವತ್ಸರಗಳ ಚರಿತ್ರೆಯನ್ನು ರಾಮಯ್ಯಂಗಾರಿ ಮೂರೇ ಮೂರು ಮಾತಿನಲ್ಲಿ ಮೊದಲೇ ಅಡಕ ಮಾಡಿದ: "ಇನ್ನೂ ಶಾಂತಿ ದೊರೆತಿಲ್ಲ" ಎಂದ. ಪಂಚತಂತ್ರದಲ್ಲಿ ಬರುತ್ತಲ್ಲೋ ಕಥೆ! ಮೂಷಿಕಸ್ತ್ರೀ ಮತ್ತೆ ಮೂಷಿಕಸ್ತ್ರೀ ಆಗಲೇ ಬೇಕಾಯಿತು, ಅಂತ, ಹಾಗಾಯಿತು, ನನ್ನ ಜೀವನ. ಆ ವಿನಾಯಕಾನಂದನ ಮಾಟದ ಮಾತಿಗೆ ಬೆರಗಾಗಿ, ಅವರ ಆತ್ಮದಿಂದ ಅನುಗ್ರಹಾಮೃತ ನೆಟ್ಟಗೆ ನನ್ನ ಹೃದಯ ಪದ್ಮಕ್ಕೇನೆ ಇಳಿಯುತ್ತದೆ ಅಂತ ನಾನು ಆ ಬಿಲಹರಿಪ್ರಾಣಿ, ಹೆಗ್ಗಣದ ಒಡಹುಟ್ಟು, ಮೂಷಕ ಎಂಬುದಾಗಿ ಹೆಸರು ಬದಲಾಯಿಸಿದ ಗಳಿಗೆಯಿಂದ.... ಥೂ! ಥೂ! ಕಂಡಕಂಡ ಮಾರ್ಜಾಲಸಂನ್ಯಾಸಿಗಳ ಲಾಂಗೂಲಗಳನ್ನೆಲ್ಲ ಹಿಡಿದು ನೇತಾಡಿದೆ. ಪುಂಡರಿಸಿದ ಬೋನುಗಳಿಂದೆಲ್ಲ ಪರಾರಿಯಾದೆ.... ಕಡೆಗೂ ಯಥಾಪ್ರಕಾರ ರಾಮಯ್ಯಂಗಾರಿಯಾಗುವುದೇ ಕ್ಷೇಮ ಅಂತ ಈಗ ಪ್ರೇರಣೆಯಾಗುತ್ತಿದೆ.

ಛೆ! ಛೆ! ಕಾಷಾಯ ಧರಿಸಿ ಎಷ್ಟು ಲಕ್ಷ ಜನ ಆಸೇತು ಹಿಮಾಚಲ ಆಕಳಿಸುತ್ತಿದಾರೆ, ಗೊತ್ತೆ, ಮಹೋಬ್ಲು! ತಿರುಕರು ತುಂಡಾಡಿಗಳು ಉಂಡಾಡಿಗಳು ಹೊಗಳುಭಟ್ಟರು ಗಿಣಿಪಾಠದವರು ಆಷಾಢಭೂತಿಗಳು, ಏಕೆ, ಭಾದ್ರಪದ ಭೂತಿಗಳು—ಎಲ್ಲರೂ ಇದಾರೆ, ಈ ಬಟ್ಟೆ ಒಳಗೆ! ಮುಸುಕು ತೆಗಿಯೋ ಮಾಯಾಂಘನಾ, ಅಂದರೆ, ಗೊತ್ತಾಗುತ್ತದೆ. ಅಲ್ಲಲ್ಲೇ ಅಡ್ಡಗೋಡೆಗಳನ್ನು ಕಟ್ಟಿಕೊಂಡು ನಮ್ಮ ಜನ ಕಲ್ಲುಹೊಡೆದು ಕಾಳಗವಾಡುತ್ತಿರುವುದಕ್ಕೆ ಇಂಥ ಕಲಹಪ್ರಿಯರೇ ಕಾರಣರು. ಪಾಪ ಅಂದರೆ ಏನು, ಎಂಬ ಅರಿವೇ ಇಲ್ಲದ ಅನೇಕ ಜನರಿಗೆ ಇಂಥವರೇ ಕಣ್ಣು ತೆರೆಯುತ್ತಿದಾರೆ, ಅಂದರೆ, ನೀನೇ ಊಹಿಸಿಕೊ! ನೋಡು, ಮಹೋಬ್ಲು, ನಾನು ಕೃತಕ ಜೀವಿ. ಈ ಶೀನಪ್ಪ ಇದಾನಲ್ಲಾ, ಇವನು, ವಿಕೃತ ಜೀವಿ. ನೀನೇ ಪುಣ್ಯವಂತ! ನನಗೆ ಪ್ರೇರಣೆಯಾಗುತ್ತಾ ಇದೆ, ಹಾಗೆ ಹೇಳು, ಅಂತ, ಆದ್ದರಿಂದ ಹೇಳುತ್ತಾ ಇದೇನೆ, ಕೋಪಿಸಕೊಳ್ಳಬೇಡ. ಏಕೆ, ಅಂತೀಯೋ, ನೀನು ಸದ್ಗೃಹಸ್ಥ; ಶೀನಪ್ಪ ಮತ್ತೆ ಮದುವೆ ಆಗದಿದ್ದದ್ದು ತಪ್ಪು. ತಾವರೆ ಎಲೆಮೇಲೆ ನೀರಿನ ಹಾಗಿದೀಯಾ, ನೀನು! ಅದೇ ಸರಿ! ನೋಡು! ಈ ವೈರಾಗ್ಯ ತ್ಯಾಗ ಸೇವೆ ಕಾಯಕ ಎಲ್ಲ ಬೋಧೆಮಾಡುವುದಕ್ಕೆ ಸರಿ; ಪೂಜೆ ಮಾಡಿಸಿಕೊಳ್ಳುವುದಕ್ಕೆ ಸರಿ. ಒಂದನ್ನು ಬಿಟ್ಟರೆ, ನೂರು

ಅಂಟಿಕೊಳ್ಳುತ್ತದೆ. ಸೇವೆಮಾಡುತ್ತಾ ಕೂತರೆ ಪ್ರತಿಷ್ಠೆ ಹೆಚ್ಚುತ್ತದೆ. ನಾನು ಮಹಾಮೇಧಾವಿ, ಸತ್ಯವಂತ, ದಯಾಮೂರ್ತಿ, ಭಂಗೀ ಸೇದದವ ನನಗಿಂತ ಇವರೆಲ್ಲ ಕೀಳು, ಎಂಬ ದುರಹಂಕಾರ ಒಳಗೊಳಗೆ ಬೆಳೆಯುತ್ತದೆ. ಈ ಕಾಷಾಯ ಕೂಡ ಜಂಬದ ಗುರುತು! ಇವತ್ತೀ ಬಿಳಿ ಬಟ್ಟೆ ಧರಿಸು ಅಂತ ನನಗೆ ಪ್ರೇರಣೆಯಾಗಿದೆ, ನಾಗರಾಜ ನೀರಜ ಇವರಿಬ್ಬರನ್ನೂ ಆ ಗಾಡಿಯಲ್ಲಿ ನೋಡಿದಾಗ, ....ಹೊಲಿಯುವುದಕ್ಕೆ ಕೊಟ್ಟಿದೇನೆ, ಬಿಳಿ ಜುಬ್ಬಾನ! ಏನೋ ಅಪ್ಪ! ಇದ್ದಷ್ಟು ದಿನ ಕಂಡವರ ಬಾಯಿಂದ ಕದನ್ನ ಕಸಿದುಕೊಳ್ಳದೆ, ಯಾರ ಕಣ್ಣಲ್ಲೂ ನೀರು ತರಿಸದೆ ಯಾರ ಕಿವಿಯಲ್ಲೂ ಕಿಡಿ ಸುರಿಯದೆ ಏನಣ್ಣ ಯಾಕಣ್ಣ ಅಂತ ಇರುವವನೇ ಸುಖಪುರುಷ. ದೇವರು ದಿಂಡರು ಎಲ್ಲ ಮಕ್ಕಳಾಟದ ಗೊಂಬೆಗಳು" ಎಂದು ರಾಮಯ್ಯಂಗಾರಿ ದೂರಿದ.

ಚಂಚು ರಾಮಯ್ಯಂಗಾರಿಯನ್ನೇ ನೋಡುತ್ತ ಅವನ ಪ್ರತಿಯೊಂದು ಮಾತನ್ನೂ ಬಿಡಿಸಿಬಿಡಿಸಿ ಅರ್ಥಮಾಡಿಕೊಳ್ಳುತ್ತಿದ್ದಳು. ತನ್ನ ರೋಗವನ್ನೂ ಅದರ ವಿಧ ವಿಧವಾದ ಲಕ್ಷಣಗಳನ್ನೂ ಬಿಡಿ ಬಿಡಿಯಾಗಿ ವಿವರಿಸುವ ಒಬ್ಬ ರೋಗಿಯಂತೆ ಅವರನ್ನು, ದೂರದಿಂದ ಪರೀಕ್ಷಿಸುತ್ತಿದ್ದಳು. ಅವಳ ಅಭಿಪ್ರಾಯವನ್ನೇ ಆಗಾಗ ಅಯ್ಯಂಗಾರಿ ಪ್ರತಿಬಿಂಬಿಸುತ್ತಿದ್ದ. ಆದರೂ ಅವಳು, "ಸೇವೆಮಾಡುತ್ತಾ ಕೂತರೆ ಪ್ರತಿಷ್ಠೆ ಹೆಚ್ಚುತ್ತದೆ ಅಂದರಲ್ಲಾ....ಅದು...." ಎಂದು ಧೈರ್ಯವಾಗಿ ಟೀಕಿಸಿಯೇ ಬಿಟ್ಟಳು.

"ಇನ್ನೇನು ಮತ್ತೆ!" ಎಂದು ಅಯ್ಯಂಗಾರಿ ಕೂಡ ನಾಲಗೆ ಝಳಪಿಸಿದ. "ಮನುಷ್ಯನ ಬಾಳೆಲ್ಲ ಪ್ರತಿಷ್ಠೆಗಾಗಿ! ನಾನು....ನನ್ನಿಂದ....ನನ್ನದು ....ಎಂಬುದೇ ಉರಿಯುವ ಪ್ರಾಣದೀಪಕ್ಕೆ ತೈಲ. ನಾನು ಮಾಡಿದ ಸೇವೆ, ಅವನು ಕೊಡು ಅಂದಾಗ ನಾನು ಕೊ ಅಂದೆ, ನಾನಿರದಿದ್ದರೆ ಅವನು ಹಾಳು, ನಾನು ತೆರೆದ ಕಣ್ಣು, ನಾನು ಹಚ್ಚಿದ ಮುಲಾಮು, ನಾನಿದ್ದರೆ ಮೂರು ಲೋಕ, ಬೀಳೋ ಮರಕ್ಕೆಲ್ಲ ನಾನೇ ಬೇರು....ಎಂಬುದೇ ಮಾನವಕುಲ ಚಕ್ರವನ್ನು ನಡೆಯಿಸುವ ಮೋಟರು."

"ಹಾಗಾದರೆ ಸೇವೆ ಎಂಬುದೇ ತಪ್ಪು; ಲೋಕದ ಬಾಲ ಡೊಂಕಾಗಿಯೇ ಇರಲಿ ಅಂತೀರಾ?"

"ಒಬ್ಬನ ಡೊಂಕನ್ನು ಮತ್ತೊಬ್ಬ ಹೇಗೆ ತಿದ್ದಿಯಾನು? ಅವನಲ್ಲೇ ನೂರು ಡೊಂಕಿರುವಾಗ! ಈಗ ನೋಡಿ, ಡಾಕ್ಟರೆ! ಬಡವ ಎಂಬುವರನ್ನು ಕಂಡು ನಾವು ಎಷ್ಟು ಅಳಬೇಕೋ, ಶ್ರೀಮಂತರೂ ಕೂಡ ಅಷ್ಟೇ ಪರಿಶೋಚನೀಯರು! ಆಮೇಲೆ ಇವರಿಬ್ಬರ ನಡುವೆ ತೆವಳುತ್ತಾರಲ್ಲಾ... ಬಡವರ ರಕ್ತ ಹೀರಿ ಶ್ರೀಮಂತರ ರಕ್ತ ಹೊಗಳುವವರು....ಕೆಳಗಿನವರ ಹಲ್ಲು ಕೀಳುತ್ತ ಮೇಲಿನವರೆದುರು ಹಲ್ಲುಕಿರಿಯುವವರು....ನಿಮ್ಮ, ನಡುವಣ ಮಟ್ಟದ ಗಗನ ಪಿಶಾಚಿಗಳು....ತ್ರಿಶಂಕೆ ಸ್ವರ್ಗದವರು....ಅವರೂ ಅಷ್ಟೆ. ಮೊದುಳುಳುಕಿದ ಮಂದಿ ಎಲ್ಲರೂ ದುಂದು ದುಬಾರಿಯಲ್ಲಿ ಹೊರಳಬೇಕು, ಅಂತಾರೆ, ಬಂಡವಾಳಗಾರರೂ ವ್ಯಾಪಾರಿಗಳೂ! ಖೂನಿ ಕಳ್ಳತನ ದೊಂಬಿ ದರೋಡೆ ಸುಳ್ಳು ಕಳ್ಳು ಹೊಳೆಯಾಗಿ ಹರಿಯಲಿ ಅಂತಾರೆ ಲಾಯರುಗಳು; ಭೂತ ಪ್ರೇತ ತಾಯಿತೆ ತಂತ್ರ ಕರ್ಮ ಜನ್ಮಾಂತರ ಜಾತಕ ಭವಿಷ್ಯ ಇವುಗಳಲ್ಲಿ ಜನಕ್ಕೆ ನಂಬಿಕೆ ಶಾಶ್ವತವಾಗಿರಲಿ ಅಂತಾರೆ ಚರ್ಚಕರು, ಪುರೋಹಿತರು; ತರ್ಕ ತಾಂಡವ ಮದ ಮಾತ್ಸರ್ಯ ವಿಷಮಿಸಲಿ ಅಂತ ಕಾಯುತ್ತಾರೆ, ಗುರುಗಳು, ಸಂಭವಾಮಿ ಯುಗೇಯುಗೇ ಅಂದದ್ದು ನನ್ನನ್ನು ಕುರಿತೇ, ಎಂಬ ಪಂಥ ಹೂಡುವುದಕ್ಕೆ; ರೋಗ ರುಜಿನ ನೋವು ಮೇವು ಕುಡಿತ ಕಡಿತ ಹೆಚ್ಚಲಿ ಅಂತಾರೆ, ವೈದ್ಯರು; ಕಾಮಕ್ರೋಧಗಳ ಮೇಲಿನ ಮೋಹ ಕೆರಳಲಿ ಅಂತಾರೆ ಸಾಹಿತಿಗಳು....ಅವರಿಗೆಲ್ಲ ಇವರು ಸೇವಕರು. ಉದ್ಧರೇದಾತ್ಮನಾತ್ಮಾನಂ, ಅಂತ ಭಗವಂತನೇ ಎರಡು ಸೈನ್ಯಗಳ ನಡುವೆ ರಥ ನಿಲ್ಲಿಸಿ ಕುರುಕ್ಷೇತ್ರದಲ್ಲಿ ಕೈಬಿಟ್ಟಿರುವಾಗ....ಸೇವೆ, ಸೇವಕ....ಎಲ್ಲ ಬರೀ ಮೋಸ."

"ಒಳ್ಳೆ ಪಾಷಂಡಿಯಾಗಿಬಿಟ್ಟೆಯಲ್ಲೋ ರಾಮಯ್ಯಂಗಾರಿ!" ಅಂತ ಶೀನಪ್ಪ ನಕ್ಕ. ರಾಯರಿಗೂ ಏನೋ ಮಾತನಾಡಬೇಕು, ಹೇಗೋ ಟೀಕಿಸಬೇಕು, ಎಂದು ತೋರಿತು. ಆದರೆ, ಅವರು ಬಹಳ ಹೊತ್ತು ಬಾಯಿ ತೆರೆಯಲಿಲ್ಲ. ಕಡೆಗೆ, "ನಮ್ಮ ಮನೇಲಿ ಒಂದು ರೇಡಿಯೋ ಇದೆ; ಅದರಹಾಗೆ, ಕಣಯ್ಯ, ನೀನು! ಶೇಕಡ ತೊಂಬತ್ತೆಂಟು ಆದರೊಳಗಿಂದ ಅಪಸ್ವರ, ಅಪಭ್ರಂಶಗಳೇ ಬರುತ್ತಿರುತ್ತವೆ; ಆದರೆ ಆಗೊಂದು ಸಲ ಈಗೊಂದು ಸಲ ಒಳ್ಳೆ ನಾದ, ಒಳ್ಳೆ ವೇದ, ನುಡಿಯುತ್ತದೆ" ಎಂದರು. "ನೀನೇನು ಮಾಡಬೇಕು ಅಂತ ಇದೀಯಾ ಇನ್ನು" ಎಂದು ನೇರವಾಗಿ ಕೇಳೇಬಿಟ್ಟರು. "ನೋಡಪ್ಪ

ಪೊರಕೆ ತಾನು ಕೊಳೆ ಪದಾರ್ಥವಾದರೂ ಕಸ ಗುಡಿಸುತ್ತದೆ. ಹಾಗೆಯೇ, ಒಂದು ಪೇವರು ನಡೆಯಿಸಿ ಯಃಕಶ್ಚಿತ್, ಜನಕ್ಕೆ ಅವರ ಅವನತಿ ಅವರೇ ಅರಿತು ಕೊಳ್ಳುವಹಾಗೆ," ಆಗ ಹೊರಗಡೆಯಿಂದ ಯಾರೋ ಕೆಮ್ಮಿದ್ದು ಒಳಗಡೆಯೇ ಕೆಮ್ಮಿದಷ್ಟು ಹತ್ತಿರ ಕೇಳಿಸಿತು, ಚಂಚುವಿಗೆ! ಅವಳು, ಎಲ್ಲರನ್ನೂ ಸಂಬೋಧಿಸಿ, "ಯಾರದು ಕೆಮ್ಮಿದ್ದು?" ಎಂದಳು. "ನಾನಿರಬಹುದು. ನನಗೆ ರಕ್ತದ ಒತ್ತಡ ಹೆಚ್ಚು, ಅಂತ ಡಾಕ್ಟರ್ ಹೇಳಿದ್ದರು. ಒಂದುವೇಳೆ, ಅದರಿಂದಾಗಿ ನನ್ನ ಕೆಮ್ಮಲು ಸದ್ದು ನನ್ನ ಕಿವಿಗೆ ಬಡಿಯಲಿಲ್ಲವೋ ಏನೊ?" ಎಂದು ಶೀನಪ್ಪ ಉತ್ತರ ಹೇಳಿದ. ರಕ್ತದ ಒತ್ತಡ ಅಂದರೆ, ಟೆಂಪರನಕ್ಕೆ ಒತ್ತುವುದಪರೂಪ.... ನೀವಲ್ಲ ಕೆಮ್ಮಿದ್ದು ಅಂತ ತೋರುತ್ತೆ....ಈಗೊಂದುಸಲ, ಕೆಮ್ಮಿ! ತಾಳೆಹಾಕಿ ನೋಡುತ್ತೇನೆ, ಎರಡು ಧ್ವನಿಗಳನ್ನೂ" ಎಂದು, ಚಂಚು ಕೇಳಿಕೊಂಡಳು. ಆದರೆ, ಅವಳ ಮಾತಿನಂತೆ ಕೆಮ್ಮಿದ್ದು ಒಳಗಿದ್ದ ಶೀನಪ್ಪ ಅಲ್ಲ; ಹೊರಗಿದ್ದ ಜವಾನ!

ಕೆಮ್ಮು ಶಾಸ್ತ್ರದಲ್ಲಿ ಜವಾನರದು ನುರಿತ ಶಾರೀರ! ರಜ ಬೇಕು, ಸಂಬಳ ಸಾಲದು, ಕೊಂಚ ಹೊರಗೆ ಹೋಗಿಬರುತ್ತೇನೆ, ಹೆಂಡತಿಗೆ ಖಾಯಿಲೆ, ಯಾರೋ ಬಂದಿದಾರೆ, ಕಚೇರಿ ಬಾಗಿಲು ಮುಚ್ಚುವ ಟೈಂ ಬಂತು—ಎಂಬ ಸೂಚನೆಗಳಿಗೆಲ್ಲ ಅವರು ಬೇರೆ ಬೇರೆ ಆಯುಕಟ್ಟಿನ ಕೆಮ್ಮುಗಳನ್ನು ಒಂದೇ ಗಂಟಲನಾಳದಿಂದ ಹೊರಡಿಸಬಲ್ಲರು. ಆತ ಅಂದು ಹೊರಡಿಸಿದ್ದು, ಯಾರೋ ಬಂದಿದಾರೆ, ಎಂಬ ಎಚ್ಚರಿಕೆಯನ್ನು!...."ಯಾರು ಬಂದಿದಾರೋ?" ಎಂದು ಚಂಚು ಅಧಿಕಾರವಾಣಿ ಬೀರಿದಳು. ಆದರೆ, ಜವಾನ, ಅದಕ್ಕೆ ಖಚಿತವಾದ ಉತ್ತರವನ್ನು ಕನ್ನಡದಲ್ಲಿ ಹೇಳದೆ, ಕೆಮ್ಮುನುಡಿಯಲ್ಲೇ ದನಿ ಹೊರಡಿಸಿದ. ಅವನಿಗೂ ತಳಮಳ! ಆಸ್ಪತ್ರೆಗೆ ಬಗೆಬಗೆಯ ಜನ ಬರುತ್ತಾರೆ; ಅವರ ಗುರುತನ್ನು ಬಹಿರಂಗವಾಗಿ ಪ್ರಕಟಿಸಬಹುದೋ, ಏನೋ, ಅಂತ. ಅದೂ ಅಲ್ಲದೆ, ಆಗಂತುಕೆಯ ಸಂಬಂಧೀಕರೇ ಆಫೀಸ್ ರೂಮಿನಲ್ಲಿರುವಾಗ? ಆಕೆಯ ಒಳಗುಟ್ಟನ್ನು ರಟ್ಟುಮಾಡಲು ತಾನು ಪಿತೂರಿ ಹೂಡಬಹುದೆ?...."ತಾವು ದಯವಿಟ್ಟು ಹೊರಗೆ ಬಂದು, ಬಂದವರನ್ನು ಇಲ್ಲೇ ಮಾತನಾಡಿಸುವುದು ವಾಸಿ," ಎಂಬ ಕೆಮ್ಮನ್ನು ಅವನು ಕೆಮ್ಮಿದ. ಚಂಚುವಿಗೆ ಅರ್ಥವಾಯಿತು. ಗಂಡಸರ ಸಹವಾಸವನ್ನು ತ್ಯಜಿಸಿ, ಅವಳು ವರಾಂಡಾಗೆ ಬಂದಳು. ಅಲ್ಲಿ

ನಾಗರಾಜ ಇರಲಿಲ್ಲ. ವೆಯಿಟಿಂಗ್ ರೂಂ ಬಾಗಿಲಲ್ಲಿ ಒಂದು ಧರ್ಮಾವರ ಸೀರೆ ಗಾಳಿಗೆ ಪಟ ಪಟ ಎನ್ನುತ್ತಿತ್ತು. ಆ ಸೀರೆ ಅವಳಿಗೆ ಚಿರಪರಿಚಿತ. ಅವಳು ಅಲ್ಲಿಗೆ ಓಡಿದಳು.

"ಚಂಚೂ."

"ಅಕ್ಕಾ."

"ನನ್ನ ಎದೆ ಒಡೆದುಹೋಗುತ್ತೆ, ಚಂಚೂ! ನನ್ನ ಮನೆಯನ್ನ ನೀನೇ ಮತ್ತೆ ಕಟ್ಟಿಕೊಡಬೇಕು. ನಾನು ನಿನ್ನ ಹಾಗೆ ಮಾತು ಕಲಿತಿಲ್ಲ. ಒಳಗೊಂದು ಕುದಿಯುತ್ತದೆ; ಹೊರಗೊಂದು ನುಡಿಯುತ್ತೇನೆ."

"ನನಗೆ ಗೊತ್ತು, ಅಕ್ಕಾ! ಮಕ್ಕಳು ಮರಿ ಎಂಬ ಮೋಹವನ್ನ ದೇವರು ನನ್ನ ಹೃದಯದಲ್ಲೂ ಹುದುಗಿಸಿದಾನೆ. ಆದರೆ, ನನಗೆ ಈ ಆಸ್ಪತ್ರೆ ಇರುವುದರಿಂದ ನಾನು ಇಲ್ಲಿ ಅವರ ಶುಶ್ರೂಷೆಯನ್ನು ಮಾಡುತ್ತಿದೇನೆ. ಇಲ್ಲಿಗೆ ಬರುವ ಮಕ್ಕಳೆಲ್ಲ ನನ್ನವೇ. ಇಲ್ಲಿಗೆ ಬರುವ ತಾಯಂದಿರೆಲ್ಲ ನನ್ನ ಹೆಣ್ಣು ಮಕ್ಕಳು.... ನಿತ್ಯವೂ ನಾಲ್ಕು ಬಾಣಂತನ, ಇಲ್ಲಿ.... ನೀನು...."

"ಬೇಡ, ಬೇಡ. ನಾನು ಸಹಿಸಲಾರೆ! ಬಸುರಿ ಹುಡುಗಿ ಏನೋ ಆಡಿತು. ನಾನೇಕೆ ಅದಕ್ಕೆ ಟೀಕೆ ಮಾಡಿಕೊಂಡು ಊಗುರಲ್ಲಿ ಹೋಗುವುದಕ್ಕೆ ಕೊಡಲಿ ತೆಗೆಯಬೇಕು? ಅಲ್ಲೇ ನನಗೆ ಬುದ್ಧಿ ಹೇಳೋದು ಬಿಟ್ಟು, ನೀನು ....ಅವರು ಬೇರೆ ಮಲಗಿದ್ದರಲ್ಲಾ.... ನಟ್ಟನಡುವೆ.... ಸಾಹೇಬರಂತೆ, ಸಾಹೇಬರು.... ರೀತಿ ನೀತಿ ಲೋಕಕ್ಕೆಲ್ಲ ಹೇಳುವವರು.... ತುಟಿ ತೆರೆದು ಪಿಟಕ್ ಅಂದಿದ್ದರೆ, ನಾನು ಬೇಡ ಅಂತಿದ್ದೆನೆ?...."

"ಈಗ ನೀನು ಹೇಗೆ ಬಂದೆ, ಇಲ್ಲಿಗೆ....?"

"ಹೇಗೋ ಬಂದೆ. ನನಗಲ್ಲಿ ನಿಲ್ಲುವುದಕಾಗುತ್ತದೆಯೆ? ಬಂಗಲಿ ಬಾಗಿಲಲ್ಲಿ, ಒಬ್ಬಳೆ?...."

"ನಡೆದೇ ಬಂದೆಯಾ? ಗಾಡಿ ಸದ್ದು ಏನೂ ಕೇಳಿಸಲಿಲ್ಲ."

"ಹುಂ."

"ಅಯ್ಯೋ! ಅಕ್ಕಾ! ಯಾರಾದರೂ ನೋಡಿದ್ದರೆ ಗತಿ, ಏನು?"

"ಗತಿ ಏನು?.... ಇವರು ರಿಟೈರಾಗಿರೋದು ಊರಿಗೆಲ್ಲ ಗೊತ್ತು.... ಆ ಚಾಡಿಕೋರ ಈಗಿನವನು, ಅವನ ಮನೆ ಬಾಗಿಲ ಮುಂದೆ ಹಾಯಲಿಲ್ಲ;

ಹಿಂದಿನ ಗಲ್ಲಿಯಿಂದಲೇ ಬೀದಿಗರುವಿನಂತೆ ಓಡಿಬಂದೆ....ಈಗ, ನಾಗರಾಜ ನೀರಜ ಎಲ್ಲಿ? ಭಾವನವರ ಮನೇಲಿದಾರೆಯೆ?"

"ನೀರಜ ಇಲ್ಲೇ ಇದಾಳೆ....ಮಲಗಿದಾಳೆ."

"ಆ?"

ಆಗ, ಒಬ್ಬಳು ನರಸು ಅಲ್ಲಿಗೆ ಓಡ್ಡೋಡುತ್ತ ಬಂದಳು. "ಡಾಕ್ಟರ್! ಡಾಕ್ಟರ್" ಎಂದು ಮೂಗರಳಿಸುತ್ತ; ಓಟದ ಭರ ಥಟಕ್ಕನೆ ನಿಂತದ್ದರಿಂದಲೂ ಅವಳ ಸುತ್ತಳತೆ ಕೂಡ ಒಂದಕ್ಕೆ ಡಬ್ಬಲ್ಲಾಗಿದ್ದದ್ದರಿಂದಲೂ, ಬೇಗೆ, ಪಾಪ! ಚಂಚು ಅವಳನ್ನು ನೋಡಿ ರೇಗಿದಳು. "ಜ್ಯೋತಿ! ನಿನಗೆ ನಾನು ಎಷ್ಟು ಸಲ ಹೇಳಬೇಕು?.....ಗಾಬರಿಪಡಬಾರದು, ಗಾಬರಿಪಡಿಸಬಾರದು, ಅಂತ! ನೀವೇ ಹೀಗೆ ಪರದಾಡುತ್ತ ಶಿದಿ ಒತ್ತಿದಹಾಗೆ ತಬ್ಬಿಬ್ಬಾದರೆ, ಇಲ್ಲಿಗೆ ಬರುವ ರೋಗಿಣಿಯರೂ ಅವರ ನಂಟರಿಷ್ಟರೂ, ಔಷಧಿ ಕುಡಿಯದೇನೆ, ಪ್ರಾಣ ಬಿಟ್ಟುಬಿಡುತ್ತಾರೆ, ಅಂತ....ಇನ್ನುಮೇಲೆ, ಹೀಗೆ ಓಡಿಬಂದರೆ, ಬಾಗಿಲಾಚೆ ನಿಂತು, ಶ್ವಾಸಕ್ಕೆ ಕೊಂಚ ಆಶ್ವಾಸಕೊಟ್ಟು, ಸುಧಾರಿಸಿಕೊಂಡು, ಅನಂತರ ಒಳಗೆ ಬಾ! ಅಷ್ಟರೊಳಗೆ, ಆಗುವ ಅನಾಹುತಗಳಿಗೆ ನೀನೂ ಹೊಣೆಯಲ್ಲ, ನಾನೂ ಹೊಣೆಯಲ್ಲ...."

ಆ ನರಸು ಬೆಚ್ಚಿ ಬೆಗಡುಗೊಂಡು ನಾಲಗೆಯನ್ನೇ ನುಂಗಿಬಿಟ್ಟಿದ್ದಳು. ಅವಳಿಂದ ಮಾತೇ ಹೊರಬರಲಿಲ್ಲ.

"ಹುಂ! ಎಷ್ಟನೆಯ ನಂಬರು?"

"ಹನ್ನೆರಡು."

"ಹನ್ನೆರಡು?"

"ಹೌದು. ಹನ್ನೆರಡು....ಹತ್ತರಲ್ಲಿ ಹನ್ನೊಂದು ಅಂತಾರಲ್ಲಾ, ಆ ಹನ್ನೊಂದಕ್ಕೆ ಇನ್ನೊಂದು!" "ಅಂದರೆ, ಹನ್ನೆರಡೆ?....ಬಾ! ಹೋಗೋಣ. ಅಕ್ಕಾ! ನೀನು ಇಲ್ಲೇ ಇರು, ಕೊಂಚ ಹೊತ್ತು...." ಎನ್ನುತ್ತ, ಚಂಚು ನಿಧಾನವಾಗಿ ಒಳಕ್ಕೆ ನಡೆದಳು.

ಸರಸಮ್ಮನಿಗೆ ತೆಪ್ಪಗೆ ಕುಳಿತಿರಲು ಮನಶ್ಶಾಂತಿ ಸಾಲದು. ಬೋನಿನೊಳಗಿನ ಹುಲ್ಲಿ(?)ಯಂತೆ ಅವಳು ವ್ಯಥೆಪಥ ತಿರುಗಿದಳು. ಗೋಡೆ ತುಂಬ ಅಸ್ಥಿಪಂಜರ, ರಕ್ತ ಪರಿಚಲನೆ, ನರಗಳ ಸಮೂಹ ಮುಂತಾದವುಗಳ ವರ್ಣ

ಚಿತ್ರಗಳಿದ್ದುವು. ಆದ್ದರಿಂದ, ಅವಳು ತಲೆ ತಗ್ಗಿಸಿ ನೆಲ ನೋಡುತ್ತ ಒಂದು ಬೆಂಚಿನಮೇಲೆ ಕೂರಬೇಕಾಯಿತು. "ಒಳ್ಳೆಯವರಿಗೆ ಇದು ಕಾಲವಲ್ಲ; ಸುಳ್ಳರು ಕಳ್ಳರು ದರೋಡೆಯುವರು ಇವರಿಗೇನೆ ದೇವರು ಮನೆತುಂಬ ಮಕ್ಕಳು ಕಣ್ಣುತುಂಬ ನಿದ್ದೆ ಕೊಡುವುದು. ಹಿರಿಯರಮೇಲೆ ಭಕ್ತಿ ವಿಶ್ವಾಸ ತೋರಿಸುತ್ತ, ಗಂಡ ಗಂಡನಬಳಗ ಅಂತ ಕಂಬನಿ ತುಂಬಿಕೊಂಡು ಅವರ ಪಾದಸೇವೆ ಮಾಡುವವರಿಗೆ ಆ ಕಂಬನೀನೇ ಗತಿ!....ನಮ್ಮ ಚಿಕ್ಕಂದಿನಲ್ಲಿ ನಮ್ಮ ತಾಯಿ ಹೇಳುತ್ತಿದ್ದಳು; ನಾನೆಷ್ಟರವಳೆ, ನಿನಗೆ? ಬರುತ್ತಾಳೆ ನೋಡುತ್ತಿರು ಅತ್ತೆ! ಅವಳ ಹಿಂಸೆ ಹೇಗೆ ತಡಿಯುತ್ತೀಯೋ, ನೀನು, ಅದನ್ನ ನೋಡಿಕೊ, ಅಂತ.... ನೋಡಿಕೊಂಡೆ. ಅದರಿಂದೇನಾಯ್ತು, ಈಗ? ಇಂಥ ಸೊಸೆ ಒಂದು ಬಂದು ಗಂಟುಬಿತ್ತು....ಒಳ್ಳೇವರಿಗೆ ಕಾಲ ಅಲ್ಲ! ಹೋಗಲಿ! ಅವಳಿಗಾದರೂ, ಇಂಥಾ ದುರ್ಬುದ್ಧೀನೇ ಬೆಳೆದು, ಅದಕ್ಕೆ ದೇವರು ಮೆಚ್ಚಿ, ಅವಳ ಮಕ್ಕಳು ಮರಿ ಸುಖವಾಗಿದ್ದು,....ನನಗಂತೂ ರಿಟೈರಾಗಿ ಹೋಯ್ತು. ಇವಾದರೂ ಮುಂದಕ್ಕೆ, ಅನುಕೂಲವಾದ ದಾರಿ ಹಿಡಿಯಲಿ" ಎಂದು ಮಂತಾಗಿ ತರ್ಕ ವಿತರ್ಕ ಮಾಡುತ್ತ ಗಳಿತಗರ್ವಳಾಗಿ ಬೆಂಚಿನಮೇಲೆ ಕಾಲು ನೀಡಿದಳು.

# ಹೋಟಲು ಮೇಜು

ನಾಗರಾಜ ಆಸ್ಪತ್ರೆ ವರಾಂಡಾದಿಂದ ಪರಾರಿಯಾದದ್ದು ಕೇವಲ ಕ್ಷುತ್ ಬಾಧೆಯಿಂದ. ನೀರಜಳನ್ನು ಮಲಗಿಸಿದ್ದಾಯಿತು; ಕರೀಸ್ವಾಮಿಯಿಂದ ತಪ್ಪಿಸಿಕೊಂಡದ್ದಾಯಿತು; ಅಪ್ಪ ಭಾವ ಇಬ್ಬರೂ ಚಂಚುಚಿಕ್ಕಮ್ಮನ ರೂಮೊಳಗೆ ಸೇರಿಕೊಂಡದ್ದಾಯಿತು.....ಇನ್ನು, ಒಬ್ಬನೇ ಕೂತು ಜೇಡರ ಹುಳದಹಾಗೆ ವಿಚಾರಗಳನ್ನು ನೂಲುತ್ತ ಕುಳಿತೇನು ಫಲ? ಅದಕ್ಕೆ ಸಿಕ್ಕಿಬೀಳಲು ಸಿದ್ಧಾಂತದ ನೊಣವೊಂದೂ ಗೋಚರಿಸಲಿಲ್ಲ. ಲಕ್ಷಾಂತರ ಜನ ಹುಚ್ಚು ಹಿಡಿದ ನಾಯಿಗಳಂತೆ ಓಡಾಡುವ ಮೆಂಗಡೂರಲ್ಲಿ ತನಗೆ ಒಪ್ಪತ್ತು ಊಟ ಸಂತೋಷವಾಗಿ ನೀಡಬಲ್ಲ ಕೈ ಇಲ್ಲವಾಯಿತೆ? ಶುಖವಾದ್ಯ ಶುಖವಾದ್ಯ ಅಂತ ಬೊಂಬಾಯಿಂದ ಮೆಂಗಡೂರುವರೆಗೂ ಜಪಿಸಿದ್ದಾಯಿತು. ಈಗ ಅದನ್ನು ಕೊಂಡು ಕೊಳ್ಳುವುದಕ್ಕೆ ಬಟ್ಟೆ ತೋರದೆ, ಬರೀ ಕೈಯಲ್ಲಿ ಮೊಳ ಹಾಕುತ್ತ....ಅವನು ಎದ್ದ. 'ನೀರಜಳಿಗೆ ಇನ್ನು ಇದ್ದಲ್ಲೀ ತಿಂಡಿ ತೀರ್ಥ ಸಿಗುತ್ತೆ; ನಾನು ಮಾತ್ರ ಹುಡುಕಿಕೊಂಡು ಹೋಗಬೇಕು' ಎಂದು ಗೊಣಗುತ್ತ, ಅವನು ಮೆಟ್ಟಲಿಳಿದ. ರಸ್ತೆಯನ್ನು ಹಿಡಿದ.

ಕವಿಪುರದಲ್ಲಿ ಫಲಾಹಾರಮಂದಿರಗಳಿಗೇನೂ ಕೊರತೆ ಇರಲಿಲ್ಲ. ಅವರವರ ಕರ್ಮಫಲಗಳನ್ನು ಅಲ್ಲಿ ಕುಳಿತು ಅನೇಕರು ಉಂಡು ಜಾರುತ್ತಿದ್ದರು. ಇದ್ದುದರ ಪೈಕಿ ಸಣ್ಣ ಬಣ್ಣ ತೊಟ್ಟು ಶುಚಿಯಾಗಿ ಕಾಣಿಸಿದ ಒಂದು 'ಭವನ'ದೊಳಕ್ಕೆ ಅವನು ಕಾಲಿರಿಸಿದಾಗ, ಅಲ್ಲೀ, ಕುರ್ಚಿ ಭರ್ತಿಯಾಗಿ ಕೆನ್ನೆ ಕೆರೆಯುತ್ತಿದ್ದ ಮಾಲೀಕ ಮಹಾಶಯ, ಥಟಕ್ಕನೆ ರೇಡಿಯೊ ಕಿವಿ ನುಲಿಚಿ ಒಂದು ಹಿಂದಿ ಹಾಡು ತರಿಸಿ ಅವನ ಕಿವಿಮೇಲೆ ಹೊಡೆದ. ತಕ್ಷಣವೇ ನಾಗರಾಜ ಪಕ್ಕಕ್ಕೆ ತಿರುಗಿ ಮುಂದಕ್ಕೆ ಓಡಿದ.

ನಮ್ಮ ಹೆಣ್ಣುಮಕ್ಕಳು ಬಗೆಬಗೆಯ ಅಡಿಗೆಗಳನ್ನು ರಚಿಸಲು ಅಸಮರ್ಥರಾದ್ದರಿಂದಲೇ ಅವರ ಆರ್ಯಪುತ್ರರು ಹೋಟಲುಗಳಿಗೆ ಶರಣುಹೋಗುವುದು; ಗಂಡಂದಿರ ಹೃದಯಕ್ಕೆ ನೇರವಾದ ದಾರಿ ಕಣ್ಣ ಮೂಲಕವಲ್ಲ, ಗಂಟಲೊಳಗಿಂದ, ಎಂದು ಅವರು ಅರಿಯರು; ಮನೆಯಲ್ಲಿ ಕಾಫಿ ತಿಂಡಿ ಮಾಡಿದರೆ,

ಮಕ್ಕಳೆಲ್ಲ ಸಾಲಾಗಿ ಬಂದು ಜೊಲ್ಲು ಸುರಿಸುತ್ತವೆಯಾದ್ದರಿಂದ, ಅವರ ಬಾಯಿಗೆ ಆಕಾಶ ತುಂಬಿ, ಪಿತೃಗಳು ಇಂಥ 'ಮಂದಿರ'ಗಳಿಗೆ ಬರುತ್ತಾರೆ; ಬೆಳಕು ಹರಿಯುತ್ತಲೂ ಆ ನಿಷ್ಕರುಣಿಗಳಾದ ಪುರುಷಾವೃಕಗಳು ಇಲ್ಲಿಗೆ ಪ್ರವೇಶಿಸಿ ಇಂಥ ನಾದಭೂತಗಳ ಕಿರಿಚಾಟದ ನಡುವೆ ಮಂಡಿಸಿ, ಇಲ್ಲಿ ಸಿಗುವ ಅನಿರ್ವಚನೀಯ ತಿನಿಸುಗಳಿಂದ ತೃಪ್ತರಾಗುತ್ತಾರೆ, ಎಂದೆಲ್ಲ ನಾಗರಾಜ ಗೊಣಗಿದ.

ಮತ್ತೊಂದು ಹೋಟೆಲ ಬಾಗಿಲನ್ನು ತಲಪಿದ. ಬಡ ಭವನ. ಸಾಲಕ್ಕೆ ಮಾರುವ ಸರಳ ಸ್ವಭಾವದವನಿರಬೇಕೆಂದು ತೋರಿತು ಒಳಗಿಂದ ಬಂದ ಹೊಗೆ ಈರುಳ್ಳಿ ವಾಸನೆಯಿಂದ ಭಾರವಾಗಿತ್ತು. 'ಇದೊಂದು ವಸ್ತುವನ್ನಾದರೂ ಹೋಟೆಲಿನವರು ವಾಸ್ತವವಾಗಿಯೂ ಉಪಯೋಗಿಸುತ್ತಿರುವರಲ್ಲಾ! ಭಲಾ!' ಎಂದು ನಾಗರಾಜ ಮೆಚ್ಚಿದ. ಈ ಕೃತಕಯುಗದಲ್ಲಿ, ಸಕ್ಕರೆ ಗುಳಿಗೆ, ಎಮ್ಮೆ ತುಪ್ಪ, ಗೋಧಿ ಹಿಟ್ಟು, ಕೇಸರಿಪುಡಿ, ಮುಂತಾದ ಪದಾರ್ಥಗಳೆಲ್ಲವನ್ನೂ, ಕೀಲೆಣ್ಣೆ ಕಸ ಕಡ್ಡಿ ಕಲ್ಲುಗಳಿಂದ ತಯಾರಿಸಿದ ವೈಜ್ಞಾನಿಕರು ಇಷ್ಟರಲ್ಲೇ ಈರುಳ್ಳಿ ಸೆಂಟನ್ನೂ ವಿರಚಿಸಿಬಿಡುತ್ತಾರೆ' ಎಂದು ಅವನು ಹೆದರಿದ.

"ಸ್ವಾಮಿ! ಇಲ್ಲಿ ರೇಡಿಯೊ ಇದೆಯೇನು?" ಎಂದು, ಪ್ರಶ್ನಿಸಿದ.

"ಇದೆ! ಆದರೆ, ಕೆಟ್ಟುಹೋಗಿದೆ."

"ಎಲ್ಲ ಹೋಟೆಲುಗಳಲ್ಲೂ ಹಾಗೆಯೇ....ಆದರೆ, ಅವರಿಗೆಲ್ಲ ಆ ವಿಷಯ ಗೊತ್ತಿಲ್ಲ....ನಿಮಗೆ ಅದರ ಪರಿಜ್ಞಾನ ಇದೆಯಲ್ಲಾ....ಆದ್ದರಿಂದ, ಬದುಕಿದೆ...." ಎಂದು ಹೇಳುತ್ತ, ನಾಗರಾಜ ಒಂದು ಕುರ್ಚಿಯನ್ನು ವಶಪಡಿಸಿಕೊಂಡ.

"ನಾವೇನು ಮಾಡುವುದು, ಸಾರ್? ನೀವೇ ಮೊದ ಮೊದಲು ರೇಡಿಯೋ ಬೇಡ, ಅನ್ನುವುದು. ಇದಿಲ್ಲದೆ ಹೋದರೆ, ಈಗ, ಸ್ಕೂಲಿಗೆ ಹುಡುಗರು ಹೋಗುವುದಿಲ್ಲ; ಮಿಟಿಂಗಿಗೆ ಜನ ಬರುವುದಿಲ್ಲ. ಪನ್ಸಾರೆ ಅಂಗಡಿ ವಾಷಿಂಗ್ ಸಲೂನು,....ಕಡೆಗೆ, ಕ್ಷೌರಮಾಡಿಸಿಕೊಳ್ಳುವ ಜಾಗಕ್ಕೂ ಕೂಡ ಒಬ್ಬ ತಲೆ ತೋರಿಸುವುದಿಲ್ಲ...."

"ನಾನು ತೋರಿಸುತ್ತಿದೇನಲ್ಲಾ! ಏನೇನಿದೆ, ಹೇಳಿ ಬೇಗ....ಕೇಳಿಲ್ಲೋದೇನು? ಮೂಗನ್ನೇ ಮುರಿಯುತ್ತಾ ಇದೆ....ಒಂದು ಮಸಾಲೆ ಹಾಕಿಸಿ.... ಆ ಪೇಪರ್ ಕೊಡಿ ಇಲ್ಲಿ....ಇದೇನಿದು? ಮತ್ತೆ ಹೊರಟೆತೋ, ಇದು?"

"ಇಲ್ಲ, ಇಲ್ಲ! ಹೋದ ತಿಂಗಳದು....ತಾರೀಖು ಮಾತ್ರ ಇವತ್ತಿನದು."

ಆಗ, ಅಲ್ಲಿಗೆ ಭಾವನವರೂ ಬಂದರು. ಶೀನಪ್ಪನವರು ಆ ಫಲಾಹಾರ ಮಂದಿರದ ಆಜೀವ ಪೋಷಕರು. ದಿನವೂ ಹತ್ತು ಗಂಟೆಗೆ ಅವರ ಪತ್ತೆ, ಆದೇ! ಅಷ್ಟುಹೊತ್ತಿಗೆ ಸರಿಯಾಗಿ, ಅಲ್ಲಿಯ ದೋಸೆ ಕಾಫಿ ಹೊಟ್ಟೆಗೆ ಬೀಳದೆ ಹೋದರೆ, ಅವರಿಗೆ ಊಟಮಾಡುವ ಅವಶ್ಯಕತೆಯೇ ತೋರುವುದಿಲ್ಲವಂತೆ. ಬೆಳಗ್ಗಿಂದ ಒಲೆಯಮೇಲೆ ಹಾಲು ಕುದಿದು ಕುದಿದು ಹತ್ತು ಗಂಟೆಗೆ ಸರಿಯಾಗಿ ಒಂದು ರೀತಿಯ ಕರಿದ ವಾಸನೆಯಿಂದ ಮಲಂಕೃತವಾಗಿರುತ್ತದೆ; ಎರಡು ದಿನ ಹಿಂದಿನ ಫಿಲ್‌ಟರ್ ಕಷಾಯದೊಂದಿಗೆ ಅದು ಬೆರೆತಾಗ, ಭಾವನವರಿಗೆ ಬಹು ಪ್ರಿಯವಾದ ಒಂದು ರುಚಿಭೇದವನ್ನು ಕೊಡುತ್ತದೆಯಂತೆ. "ಇನ್ನೆಲ್ಲೂ ಇಂಥ ಕಾಫಿ ಸಿಗುವುದೇ ಇಲ್ಲ....ಪುಣ್ಯ ಮಾಡಿದ್ದೆ, ನೀನು, ಇಲ್ಲಿಗೆ ಎಡವಿದೆಯಲ್ಲಾ!....ನಿಮ್ಮಪ್ಪನಿಗೆ ಇದೊಂದೂ ತಿಳಿಯದು.... ಆರಿಹೋದ ಸರಸಮ್ಮನ ಕಷಾಯವೇ ಅವನ ಹಣೇಬರಹ....ಅಂಥಾದ್ದರಲ್ಲೂ, ಗೋಖಲೆ, ದೇಶಸೇವೆ, ಬೋಧನೆ, ಸಾಧನೆ ಅಂತ ಹುಮ್ಮಸ್ಸು ಉಳಿಸಿಕೊಂಡಿದಾನಲ್ಲಾ, ಅದಕ್ಕೇ ನನಗೆ ಅವನಮೇಲೆ ಅಷ್ಟು ಮಮತೆ! ಎಲ್ಲಾದರೂ ಒಂದು ಕಡೆ, ಅವನನ್ನ ಕಟ್ಟಿಹಾಕಿ, ಚೆನ್ನಾಗಿ ದುಡಿಸಿ, 'ಇದೇ, ಕಣೊ, ದೇಶಸೇವೆ,' ಅಂತ ಡಂಗು ಬಡಿದುಬಿಡಬೇಕು! ಏನಂತಿಯಾ?....ಕೂತಿದಾನೆ, ಅಲ್ಲೇ, ಚಂಚು ರೂಮಲ್ಲೇ!....ನಾಗೂ! ಆ ಕರೀಸ್ವಾಮಿ ಈ ಊರಿನವನೇ! ಗೊತ್ತೋ ನಿನಗೆ?....ಅವನ ಹಳೇ ಕ್ಲಾಸ್‌ಮೇಟು....ನಾನೂ ನೋಡಿದೇನೆ....ಬಹಳ ಆಟ ಆಡಿದಾನೆ, ಹಿಂದೆ. ಇಲ್ಲೆಲ್ಲ....ಫುಟ್‌ಬಾಲ್ ಆಟದಲ್ಲಿ ಥೇಟ್ ಜಾತಿ ಕತ್ತೆಯಹಾಗೆ, ಹಿಂಗಾಲಲ್ಲಿ ಹೊಡೆದು, ಚೆಂಡನ್ನ ಕಿವಿ ಮಧ್ಯದಿಂದ ನೂಕುತ್ತ ನೂಕುತ್ತ ಗೋಳೊಳಗೆ ತೂರಿಸುವುದನ್ನು ನೋಡುವುದಕ್ಕೆ ಸಾವಿರ ಕಣ್ಣು ಸೇರಿದರೂ ಸಾಲದು, ಕಂಟ್ರಾಕ್ಟರಿಗೆ! ರಾಮಯ್ಯಂಗಾರಿ ಅಂತ ಕರೆಯೋದು ಅವನನ್ನ ಇಲ್ಲಿ ಎಲ್ಲರೂ!....ಈಗ ಅವನ ವೈರಾಗ್ಯಕ್ಕೇನೆ ವೈರಾಗ್ಯ ಬಂದುಬಿಟ್ಟದೆ! ಬಿಳಿ ಬಟ್ಟೆ ಉಟ್ಟು, ಪ್ರಚಾರ....ಮಾಡುತ್ತಾನಂತೆ ಅವನು, ಕನ್ನಡಿಗರ ಮುಂದೆ ಕನ್ನಡಿ ಹಿಡಿಯುತ್ತಾನಂತೆ" ಎಂದು ಹೇಳುತ್ತ ಭಾವನವರು ದೋಸೆ ಮುರಿದರು.

"ಹಾಗಾದರೆ, ನಮ್ಮ ಶಂಖವಾದ್ಯವನ್ನು ಅವರೇ ಕೊಂಡುಕೊಳ್ಳುತ್ತಾರೋ ಏನೊ? ಒಳ್ಳೇ ವ್ಯಾಪಕದ ಆಸಾಮಿ, ಆತ! ಪ್ರೇರಣೆ ಆಯಿತು, ಅಂದ್ರೆ, ಸರಿ! ಪ್ರೇತದಹಾಗೆ ಮೆಟ್ಟಿಬಿಡುತ್ತಾರೆ." ಎಂದು ನಾಗರಾಜ ಮೆಲ್ಲಗೆ ಭಾವನವರ ಆಶೋತ್ತರಗಳನ್ನು ಹೊರಗೆಳೆಯಲು ಪ್ರಯತ್ನಿಸಿದ. 'ನೀವೇ ಕೊಂಡುಕೊಳ್ಳಿ! ನಾನು ಅದನ್ನ ಬದುಕಿಸಿ ಮೊಳಗಿಸುತ್ತೇನೆ' ಎಂದು ಅವರನ್ನು ಹುರಿದುಂಬಿಸಿ ಕಾರ್ಯವನ್ನು ಸಾಧಿಸಿಕೊಳ್ಳಬೇಕೆಂಬುದು ಅವನ ಹಂಬಲ. ಮಸಾಲೆ ದೋಸೆ ಗಂಟಲನಾಳದಲ್ಲಿ ಈಜಾಡುತ್ತಿರುವಾಗಲೇ ತನ್ನ ಸೂಚನೆ ಒಳಹೊಕ್ಕರೆ, ಜಯವಾದೀತೆಂಬುದು ಅವನ ಭರವಸೆ."

"ಅದೇನೂ ನಡಿಗಡಿಯುವ ಹಾಗಿಲ್ಲ."

"ಏಕೆ? ಹಾಗೆನ್ನಬೇಡ, ಭಾವ! ನೂರಾರು ಜನರ ಕಿಸೆಗೆ ಕೈಹಾಕಬಲ್ಲ ಚಾತುರ್ಯ ಇದೆ, ಅವರಿಗೆ. ಬೊಂಬಾಯಿ ಕಡೆ, ಅವರಿಗೆ ಶ್ರೀಮಂತ ಶಿಷ್ಯರು ಬಹಳ"

"ಬಟ್ಟೆ ಬಣ್ಣ ಬಯಲಾಯದಮೇಲೆ ಶಿಷ್ಯರೆಲ್ಲಿ ಉಳಿಯುತ್ತಾರೋ?"

"ಆ ಕುರಿಗಳ ಕಣ್ಣಿಗೆ, ಅದೂ ಒಂದು ಪವಾಡವಾಗುತ್ತದೆ, ಅಷ್ಟೆ...."

"ಆದರೆ, ಬನವಾಸಿಜೋಗಿಯ ಜೀವನದಲ್ಲಿ ಬರುತ್ತಲ್ಲಾ....ಒಂದುಸಲ ಅವರು ಬಾಬಾಬುಡನ್‌ಗಿರಿಯಲ್ಲಿ ನೂರು ಕಾಡುಕೋಣಂದಿರನ್ನು ನಾಡುಕೋಣಂದಿರಾಗಿ ಮಾಡಿ, ಅಂತ ರೈತರು ಕೇಳಿದಾಗ, "ಕುಂಭಕೋಣಕ್ಕೆ ಹೋದರೂ ಕೋಣ ಕೋಣನೇ", ಅಂತ ಗುರು ಹೇಳಿಲ್ಲವೆ?....ನೀನು ಓದಿಲ್ಲವೇ, ಆ ಪುಸ್ತಕ? ಬಹಳ ಮಹಾತ್ಮ್ಯೆ ಇದೆ, ಆತನಲ್ಲಿ....ಆದರೆ, ಈ ಅಯ್ಯಂಗಾರಿ ಎಲ್ಲಿ, ಆ ಜೋಗಿ ಎಲ್ಲಿ? ಅದೂ ಅಲ್ಲದೆ, ನಾಗರಾಜ! ಇವತ್ತಲ್ಲ ನಾಳೆ ನಿನಗೆ ಗೊತ್ತಾಗಲೇ ಬೇಕು....ಹೇಳುತ್ತೇನೆ, ಕೇಳು, ಮುಚ್ಚುಮರೆ ಏಕೆ? ಕುಲಾವಿ ಹೊಲೆಸಿರುವುದು ಕೂಸಿಗೆ ಗೊತ್ತಾಗಿಯೇ ಆಗುತ್ತೆ?.... ಶಂಖವಾದ್ಯ ಈಗ ಮಾರಾಟಕ್ಕಿಲ್ಲ!"

"ಏಕೆ? ಅಶ್ಲೀಲದ ಅಪಶ್ರುತಿ ಹೊರಡಿಸುವುದಿಲ್ಲ ಇನ್ನು, ಅಂತ, ಕೆಲಸಗಾರರೆಲ್ಲ ಹಿಂದಕ್ಕೆ ಬಂದು, ಹಿಂದಿನವರೇ ಕೈಗೆ ಎತ್ತಿಕೊಂಡರೇನು?"

"ಇಲ್ಲ! ಅದು ಬೇರೆ ಕೈಗೆ ಹೋಯ್ತು."

"ನಾನು ಅವರನ್ನು ಹೋಗಿ ಕಾಣುತ್ತೇನೆ; ಯಾವ ನಂಬಿಕೆ ಮೇಲೆ ಬೊಂಬಾಯಿಂದ ಇಲ್ಲಿಗೆ ಬಂದೆ, ಅಂತ ಅವರಿಗೆ ತಿಳಿಸುತ್ತೇನೆ....ನನ್ನನ್ನ ಬಹುಶಃ ಕೆಲಸಕ್ಕಿಟ್ಟುಕೊಂಡಾರು!"

"ನಿನಗೆ ಏಕೆ ವೃಥಾ ಶ್ರಮ?....ನೀನೇ ಅದಕ್ಕೆ ಸಂಪಾದಕ!"

"ಹಾಸ್ಯಮಾಡುತ್ತೀಯಾ, ಭಾವ!"

"ಇಲ್ಲ, ಕಣೊ! ಮಹಾಶಯ!....ನಾನೇ ನಿನ್ನನ್ನ ನಿಯಮಿಸುವವನು!"

"ನಿಮ್ಮ ಮಾತು ನಡಿಯುತ್ತದೆಯೆ?"

"ಚೆನ್ನಾಗಿ ಹೇಳಿದೆ! ನಾನೇ ಕೊಡುಕೊಂಡಿರುವಾಗ....ನಿನಗೋಸ್ಕರ....?" ನಾಗರಾಜ ಭಾವನವರನ್ನು....ಬಿಗಿಯಾಗಿ ತಬ್ಬಿಕೊಂಡ! "ಭಾವ, ಭಾವ, ಭಾವಾ" ಎಂದು ತೊದಲಿದ. ಭಾವನವರ ಉತ್ತರೀಯ ತುದಿಯಿಂದಲೇ ಅವನು ಕಣ್ಣೊರಸಿಕೊಂಡ. ಭಾವನವರ ಬಟ್ಟತಲೆ ಮೇಲೆ ಕೈಯಾಡಿಸಿದ. ಆ ಹೋಟಲೇ ಇಂದ್ರಭವನವಾಗಿ ತೋರಿತು, ಅವನಿಗೆ! ದೇವಲೋಕ. ಸಭೆ, ಸಂಗೀತ. ಶ್ರೀನಿವಾಸದೇವರು, ಮಹಾಮಂಗಳಾರತಿ....

"ನಾಗರಾಜರಾಯರು ಯಾರ್ರಿ?" ಎಂಬ ಕನ್ನಡದ ಮಂಗಳೂರು ಧ್ವನಿ! ನಾಗರಾಜ ಕೆಳಕ್ಕಿಳಿದ. ಅವನನ್ನು ಕೂಗಿದ್ದು ಹೋಟಲು ಮಾಲೀಕರು. ಅವನು ಅತ್ತ ಕಡೆ ಓಡಿದ. ಅಲ್ಲಿ ನಿಂತಿದ್ದ ಜವಾನ ಒಬ್ಬ, "ಬರ ಹೇಳುತ್ತಾರೆ, ಸ್ವಾಮಿ, ಡಾಕ್ಟರು," ಎಂದ, ಅವನ ತಲೆ ತಿರುಗಿತು. ಮೇಜಿನ ಮೂಲೆಯನ್ನು ಬಿಗಿಯಾಗಿ ಹಿಡಿದ. "ಅಮ್ಮಾವರು ಹೆತ್ತರು; ಗಂಡು ಮಗು!" ಅಂದದ್ದು ಕೇಳಿಸಿತು. ಅಲ್ಲಿಗೆ ಅವನ ಹಿಂದೆಯೇ ಬಂದಿದ್ದ ಭಾವನವರು ನಾಗು ಬೆನ್ನಮೇಲೆ ಬಲವಾಗಿ ಗುದ್ದಿದರು. 'ಬಾರೋ, ಲೋ, ಭೂಪ,' ಎಂದು ಅವರು ನಾಗರಾಜನನ್ನೂ ಎಳೆದುಕೊಂಡು ಸರಸರನೆ ನಡೆದರು.

* * * *

ಶೀನಪ್ಪನವರು ದೋಸೆ ನೆನೆಸಿಕೊಂಡು ಆಸ್ಪತ್ರೆಯಿಂದ ತಪ್ಪಿಸಿಕೊಂಡು ಹೋದಕೂಡಲೇ, ರಾಮಯ್ಯಂಗಾರಿಗೂ ಅವರನ್ನನುಸರಿಸಲು ಪ್ರೇರಣೆಯಾಯಿತು. "ಮಹೋಬ್ಬು! ಒಬ್ಬಿಬ್ಬರು ಸಾಹುಕಾರರನ್ನ ನೋಡಿ ಬರಬೇಕು. ಸಂಜೆ ಮನೆ ಹತ್ತಿರಕ್ಕೆ,....ಬೇಡ....ಇನ್ನೆಲ್ಲಿ ಕಾಣೋಣ....ಸಾಲ್ ಬಾಗ್?....ಹುಂ....ಹಾಗೆಯೇ ಆಗಲಿ....ಅಲ್ಲಿ ಕಾಣೋಣ. ನೋಡು!

ನಾವಿಬ್ಬರೂ ಗಳಸ್ಯ ಕಂಠಸ್ಯ ಮಾಡಿಕೊಂಡು ಈ ಜನಕ್ಕೆ ಒಳ್ಳೇ ದಾರಿ ತೋರಿಸುವ ಪ್ರಯತ್ನ ಮಾಡೋಣ. 'ಕೆಲಸವಿಲ್ಲದ ಕವಿ ಹೊಲಸು ಕಾವ್ಯ ಕಟ್ಟಿದ' ಅಂತಾರೆ; ನಾವು ಸಮಾಜದ ಹೊಲಸು ಎತ್ತಿಹಾಕೋಣ....ನಿನಗೆ ಸಂಸಾರದ ಅನುಭವ ಇದೆ; ನೀನು ಲೆಕ್ಕಾಚಾರದ ಮನುಷ್ಯ....ನಾಲ್ಕು ಕಾಸು ಬರುವ ಉಪಾಯ...." ಎಂದು ಹೇಳಿ ಹೆಜ್ಜೆ ಹಾಕಿದ.

ಇನ್ನೇನಿಲ್ಲದಿದ್ದರೂ ವೆಂಗಡೂರಿನಂತಹ ಬೆಂಗಾಡಿನಲ್ಲಿ ಮಾತಿಗೊಬ್ಬ ಮಹಾಶಯ ಗಂಟುಬಿದ್ದನಲ್ಲಾ, ಅಂತ ರಾಯರಿಗೆ ತೃಪ್ತಿ. ಶೀನಪ್ಪನೇನೋ ಇದ್ದ. ಆದರೆ, ಅವನಿಗೆ ಕೇವಲ ಹಸುವಿನಗುಡಿಯ ಹಾವಳಿಗಳ ಮೇಲೆಯೇ ದೃಷ್ಟಿ. ಅಲ್ಲಿಯವರ ಕುಡಿತ, ಅದರಿಂದಾಗುವ ಧನಸ್ತಾಪ, ಅಲ್ಲಿಯ ಗೃಹ ಚ್ಛಿದ್ರ ವ್ಯಾಜ್ಯ, ಅಲ್ಲಿಯ ಶ್ರೀಮಂತರ ಸಲಾಮುಗಿರಿ, ಗುಲಾಮತನ, ಅವರ ಭೋಗ, ರೋಗ, ಇವನ್ನೆಲ್ಲ ಕೇಳಿ ಕೇಳಿ ರಾಯರ ಕಿವಿ ಜೋಲು ಬಿದ್ದಿತ್ತು. ರಾಮಯ್ಯಂಗಾರಿಯಾದರೆ, ಬೃಹಚ್ಚರಣದವ; ಜೀವನದ ಬಹು ಮುಖ್ಯ ಸಮಸ್ಯೆಗಳನ್ನ ಮನದಲ್ಲಿ ಹೆಪ್ಪುಹಾಕಿ ಮಥನ ಮಾಡಿರುವವ; ದೇವರು ದಿಂಡರು ಎಂಬುದರಲ್ಲಿ ಅವನಿಗೆ ನಂಬಿಕೆ ನಶಿಸಿಹೋಗಿದ್ದರೂ, ಇನ್ನೂ ಪ್ರಾಣಿಗೆ, ಮಾನವನ ಆತ್ಮಶಕ್ತಿಯ ಮೇಲೆ ವಿಶ್ವಾಸವಿದೆ. ಅಲ್ಲದೆ, ದಕ್ಷ! ಹಠ ವಾದಿ. ಮೊದಲಿಗಿಂತಲೂ, ಮೊಂಡ. ಬಡಪೆಟ್ಟಿಗೆ ಸೋಲನ್ನೊಪ್ಪಲಾರ. 'ಸರಸು ಒಪ್ಪಲಾರಳು, ಇವನನ್ನ! ಬಟ್ಟೆ ಬದಲಾಯಿಸಿದವ ಅಂತ ಕೇಳಿದರೆ, ಬೆಂಕಿ ಕಾರುತ್ತಾಳೆ. ಖಂಡಿತ ಮನೆಯೊಳಕ್ಕೆ ಸೇರಿಸುವುದಿಲ್ಲ. ಅವನು ನಿಂತ ಜಾಗದಲ್ಲಿ ಗೋಮಯ ಹಚ್ಚುತ್ತಾಳೆ....ಬೋಧೆ, ಅಂದನಲ್ಲಾ! ಇವನು ಹೇಗೆ ಬೋಧೆ ಮಾಡುತ್ತಾನೆ? ಉಪನ್ಯಾಸ ಅಂದರೆ, ಎಷ್ಟು ಸುರೂಪಿಯಾದರೂ, ಜನ ಎಲ್ಲೆಲ್ಲೋ ಅವಿತುಕೊಂಡು ಬಿಡುತ್ತಾರೆ. ಹರಿಕಥೆ ಅಂದರೆ, ಇವನಿಗೆ, ಹರಿ ಅಂದರೇನೆ ಉರಿ! ದೇವರು ಎಂಬ ಒಂದನ್ನು ತಲೆಗೆ ಇರಿಸಿಕೊಂಡು, ಆ ಮುಸುಕಿನೊಳಗೆ ಎಷ್ಟು ಗುದ್ದಿದರೂ, ಜನ ಮತ್ತೆ ಮತ್ತೆ ಕೇಳುತ್ತಿರುತ್ತಾರೆ. ಆದರೂ, ಭಾರತದ ಉದ್ಧಾರಕ್ಕೆ, ನಮ್ಮ ನೂರಾರು ದೇವರುಗಳೇ ದೊಡ್ಡ ಕಂಟಕ. ಅವರಿಂದಾಗುವ ಜಗಳ ಒಂದಿಲ್ಲದಿದ್ದರೆ, ಮನುಷ್ಯ ಅದನ್ನ ಎಂದೋ ಸಾಧಿಸಿಬಿಡುತ್ತಿದ್ದ, ಸತ್ಯ ದಯೆ ಬುದ್ಧಿ ಇವನ್ನು ಬೆಳೆಸಿಕೊಂಡು. ಈಗೇನು? ನನ್ನ ದೇವರು ನುಡಿದದ್ದೇ ಸತ್ಯ, ನನ್ನ ದೇವರ ಒಕ್ಕಲಿಗೇ ದಯೆ, ನನಗೆ

ದೇವರು ಹೇಳಿಕೊಟ್ಟಿದ್ದೇ ಬುದ್ಧಿ!....ಹೌದು! ರಾಮಯ್ಯಂಗಾರಿಗೆ ಇದೆಲ್ಲ ಚೆನ್ನಾಗಿ ಅನುಭವವಾಗಿದೆ....ಗೋಖಲೆ ಕೂಡ ಈಗ ಇದ್ದಿದ್ದರೆ, ಅದನ್ನೇ ಹೇಳುತ್ತಿದ್ದರು, ಅಂತ ತೋರುತ್ತೆ. ಅವರ ಈಗಿನ ಸಂದೇಶ, ಕೊಂಚ ನನ್ನಿಂದ ನನ್ನ ಸಹಾಯದಿಂದ, ಪ್ರಚಾರವಾಗಲಿ ಅಂತಲೇ ಅಯ್ಯಂಗಾರಿಗೆ ಇಲ್ಲಿಗೆ ಬಂದು ನನ್ನನ್ನು ನೋಡಲು ಪ್ರೇರಣೆ ಆಯಿತೊ, ಏನೊ?....ಇವನ ಸಂಗಡ ಸೇರಿ ಹಳೇ ಚಪಲವನ್ನೂ ತೀರಿಸಿಕೊಳ್ಳೋಣ! ಕಡೆಗೆ, ನಾನು ಹೋಗುವ ತಾಣ ದಲ್ಲಿ ಗೋಖಲೆಯುವರು ಸಿಕ್ಕರೆ,....ಅಲ್ಲ....ಗೋಖಲೆಯವರು ಇರುವ ಕಡೆಗೆ ಹೋಗುವ ಪುಣ್ಯ ನನಗೆ ದೊರೆತರೆ, ಅವರೆದುರು ಮುಖ ತಗ್ಗಿಸಬೇಕಾದ ಪ್ರಮೇಯವೂ ಒದಗುವುದಿಲ್ಲ....

"ಕರೆಯುತ್ತಿದ್ದಾರೆ, ಡಾಕ್ಟರು" ಎಂಬ ವಾಕ್ಯ ರಾಯರ ಹಗಲು ಕನ ಸನ್ನು ಕಡಿದುಹಾಕಿತು .....ಅವರನ್ನು ಕಾಣುತ್ತಲೂ ವರಾಂಡಾದ ತುತ್ತ ತುದಿಯಿಂದ ಸರಸು ಓಡೋಡಿ ಬಂದಳು. ಚಿಕ್ಕ ಮಹಾಬಲರಾಯರ ಜನನ ವಾರ್ತೆ ರಾಯರ ಕಿವಿ ಮುಟ್ಟಿತು. ಆದರೆ, ಕೂಡಲೇ, ಸರಸು ಬಿಕ್ಕಿ ಬಿಕ್ಕಿ ಅಳತೊಡಗಿದಳು. "ನೀವೇನುಬೇಕಾದರೂ ಹೇಳಿ! ನಾನು ನಿಮ್ಮ ಮಾತಿನಂತೆ ನಡೆಯುವುದಿಲ್ಲ, ಇನ್ನು! ಆಯಿತು! ನಿಮ್ಮ ಮಾನವನ್ನ ಜೋಪಾನವಾಗಿರಿ ಸೋದಕ್ಕೆ ನಾನು ಸಂಕಟಪಟ್ಟಿದ್ದೆಲ್ಲ ಮುಗಿಯಿತು. ಬೆಳಗ್ಗೆ, ಪಾಪ, ಅವಳು ನನ್ನನ್ನ ಹರಸಿ ಅಂತ ನಮಸ್ಕಾರಮಾಡಿದರೆ, ನೀವೆಲ್ಲ ಸುತ್ತ ನಿಂತುಕೊಂಡು ನಾನು ಹೇಗೆ ಎಗರಾಡುತ್ತೇನೆ ಅಂತ ನೋಡಿ ಕಾಳಿಂಗಿ ತಲೆಮೇಲೆ ನಾಟ್ಯ ಆಡೋದಕ್ಕೆ ಕಾಯುತ್ತಿದ್ದಿರಿ, ಅಲ್ಲವೆ? ನನಗೆ ಗೊತ್ತು, ಅಂದ್ರೆ! ಅತ್ತೆ ಸೊಸೆ ವ್ಯಾಜ್ಯ ಹೂಡಿಸುವುದೇ, ಮಾವಂದಿರು! ಹೆಂಡತಿ ಮರ್ಯಾದೇನ ಸೊಸೆಯೆದುರು ತೆಗೆದುಹಾಕೋದು! ನ್ಯಾಯನೀತಿ ಹೇಳದೆ, ಗೃಹಕೃತ್ಯದ ಸೊಟ್ಟನ್ನ ನೆಟ್ಟಗೆ ಮಾಡದೆ, ಮಟ್ಟವಾಗುವ ತನಕ ಸುಮ್ಮನಿರುವುದು!.... ನೀವು ಏನೇ ಹೇಳಿ! ನಾನು ಇಲ್ಲಿಂದ ಇವಳನ್ನೂ ಮಗನನ್ನೂ...."

"ಆ? ಏನು ಮಾಡುತ್ತೀಯಾ?"

"ಗೋಕುಲಕ್ಕೇ ಕರೆದುಕೊಂಡು ಹೋಗುತ್ತೇನೆ."

"ಅದು ಹೇಳುವುದಕ್ಕೆ, ಇಷ್ಟೊಂದು ಮಾತು ಬೆಳೆಸೋದು...."

"ನಾನು, ಸಣ್ಣಮಕ್ಕಳ ಆರೈಕೆಮಾಡದೆ ಇಪ್ಪತ್ತೆರಡು ವರ್ಷವಾಯಿತು, ಗೊತ್ತಿದೆಯೆ?....ಇಷ್ಟು ವರ್ಷವೂ ನಿಮ್ಮ ಆರೈಕೆಯಲ್ಲೇ ಕಳೆಯಿತು!"

"ಅಯ್ಯೋ, ಮಹರಾಯತಿ!...."

"ಮಗನಮೇಲಿನ ದ್ವೇಷದಿಂದ ನೀವು...."

"ಛೆ! ಛೆ! ನಾಗರಾಜ ಇದೇ ಊರಿನಲ್ಲಿ ಬೇರೆ ಮನೆಯಲ್ಲಿದ್ದರೆ, ಯಾರಿಗೆ ಭೂಷಣ, ಹೇಳು! ಆ ಶಂಖವಾದ್ಯ ಬೇರೆ, ನಿಂತುಹೋಗಿ ಬಿಟ್ಟಿದೆಯಂತೆ! ಅವನು ಅಲ್ಲಿ ಇಲ್ಲಿ ಚಾಕರಿ ಸಿಕ್ಕದೆ ಅಲೆಯುವುದು ಯಾವ ದೇವರಿಗೆ ಪ್ರೀತಿ?...."

"ಯಾವ ದೇವರಿಗೆ ಪ್ರೀತಿ, ಅಂತ ಚರ್ಚೆಮಾಡುತ್ತ ನೀವು ಪುರಾಣ ತೆಗೆಯಬೇಕಾಗಿಲ್ಲ! ನನ್ನ ಮಾತು ಕೇಳಿ! ಸೊಸೆ ಮನೆಗೆ ಬಂದರೆ, ನನ್ನ ಹಿಂಸೆ ಕಡಮೆ ಆಗುತ್ತೆ ನಿಮಗೆ!"

"ಪಾಪ, ಪಾಪ! ಅಂಥ ಮಾತು ಯಾಕೆ ಆಡುತ್ತೀಯಾ, ಈಗ? ನನಗೆ ಬೇಕಾಗಿದ್ದದ್ದನ್ನೇ ನೀನು ಬಲವಂತಪಡಿಸುತ್ತಿದೀಯ! ಹನ್ನೊಂದನೆಯ ದಿನ, ಸೊಸೆ ಮೊಮ್ಮಗ ಬರಲಿ! ಇವತ್ತೇ, ನಾಗರಾಜ ಬಂದುಬಿಡಲಿ! ಇಲ್ಲೇ ಇದ್ದ ಅವನು! ನೀನೇ ಹೇಳುವಿಯಂತೆ ಅವನಿಗೆ!"

"ನಾನು ಅವನಿಗೆ ಎಲೆ ಅಡಿಕೆ ತೋರಿಸಿ, ಬಾ ಅಂತ ಕರೆಯಬೇಕೇನು? 'ಲೋ! ನಾನು ಮಾಡಿದ್ದೆಲ್ಲ ತಪ್ಪು', ಅಂತ! ನೀವೇ ಹೇಳಿ!"

"ಆಗಲಿ, ನಾನೇ ಹೇಳುತ್ತೇನೆ ಈಗಲೇ ಬಂದುಬಿಡು, ಅಂತ!"

"ಹುಂ! ಮನೆಗೆ ನೀವೇ ತಾನೆ ಸಮಸ್ತ ಸಾಮ್ರಾಜ್ಯ! ನಾನು ಬರೀ ಕೂಲೀ ಹೆಂಗಸು! ನನಗೆ ಯಶೋವಧೆಯಾಗಬೇಕು, ಅಲ್ಲವೆ?"

"ನೋಡಿದೆಯಾ! ನೀನೂ ಹೇಳುವುದಿಲ್ಲ! ನಾನೂ ಹೇಳಬಾರದು.... ಹಾಗಾದರೆ, ಅವನೆಲ್ಲಾದರೂ ಅಲೆಯಲಿ...."

"ಹೀಗೆ ನೀವು ಹಗ್ಗ ಬಿಚ್ಚಿ ಸಡಿಲ ಮಾಡಿದ್ದರಿಂದಲೇ ಅವನು...."

"ಕಡೆಗೇನು, ನಿನ್ನ ತೀರ್ಮಾನ? ಯಾರು ಹೇಳುವುದು, ಅಂತ?...."

"ಚಂಚೂನ ಕೇಳ್ತೀನೆ, ಯಾರು ಕರೆದರೆ ಚೆನ್ನ, ಅಂತ.

"ಅಂತೂ, ಒಂದು ನಿರ್ಧಾರಕ್ಕೆ ಬಂದೆಯಲ್ಲಾ, ಸದ್ಯಃ....ಬಾ! ಒಳಗೆ ಹೋಗಿ, ತಾಯಿ ಮಗು ಇಬ್ಬರನ್ನೂ ನೋಡಿಬರೋಣ....ನಾಗರಾಜ ಚಂಚು ಅಲ್ಲೇ ಇರಬಹುದು...."

# ಕಾಲುದಾರಿ

ಸಾಲ್‌ಬಾಗ್ ದಾರಿಯಲ್ಲಿ, ಮಾಂಬಳ್ಳಿ ಚೌಕದ ಹತ್ತಿರವೇ, ರಾಮಯ್ಯಂಗಾರಿ ಸಿಕ್ಕಿದ, ರಾಯರಿಗೆ, ಹೊಸ ಬಟ್ಟೆಯನ್ನುಟ್ಟ ರಾಮಯ್ಯಂಗಾರಿ! "ಮಹೋಬ್ಳು! ನೀನು ಕಾಗದ ಪತ್ರ ಭದ್ರವಾಗಿ ನೋಡಿಕೊ, ಸಾಕು", ಎಂದ. ರಾಯರಿಗೆ ದಿಗ್ಭ್ರಮೆ ಹಿಡಿಯಿತು. "ಇದೇಥಾದ್ದು ನನಗೆ ಬರುವ ಕಾಗದಪತ್ರಗಳು ಬಹಿರಂಗವಾದರೆ, ಯಾವ ಗುಬ್ಬಿಗೂ ಬ್ರಹ್ಮಾಸ್ತ್ರ ತಗಲುವ ಹಾಗಿಲ್ಲವಲ್ಲಾ, ಇವನಿಗೇಕೆ ಇಷ್ಟು ಕಳವಳ?" ಎನ್ನಿಸಿತು. "ಮಿಕ್ಕಿದ್ದನ್ನೆಲ್ಲ ನನಗೆ ಬಿಟ್ಟುಬಿಡು" ಎಂದ, ಅಯ್ಯಂಗಾರಿ...."ಏಕೆ?" ಎಂದರು, ರಾಯರು ಎಲ್ಲೋ ಜ್ಞಾನದಲ್ಲಿ.

"ಕಟ್ಟಿಕೊಳ್ಳುತ್ತೀಯೇನು? ಕಟ್ಟಿಕೊ, ನನಗೇನು? ನಿನ್ನ ಅನುಕೂಲಕ್ಕೇನೆ ನಾನು ಹಾಗೆ ನಿರ್ಬಂಧ ಹಾಕಿದ್ದು....ನಿನಗೆ ಅಭ್ಯಾಸವಿರುವ ಕಸಬಿನ ಮೂಲಕವೇ ನಿನ್ನ ಸೇವೆ ನಡೆಯಲಿ, ಅಂತ. ನಿನಗೆ, ತಪ್ಪು ತಿದ್ದುವ ಖುಷಿ ಇದ್ದರೆ, ತಿದ್ದು! ಸಾಕಾಗುವಷ್ಟು ತಿದ್ದು! ಜೋಡಿಸುವ ಖುಷಿ ಬಂದರೆ, ಜೋಡಿಸು. ಸಾಧ್ಯವಿಲ್ಲ, ಲೇಖನ ಬರೆಯಬೇಕು ಅನ್ನಿಸಿದರೆ, ಅದನ್ನೂ ಗೀಚು! ನಿನ್ನ ತೋಳಿನ ಅಗಲ, ನಿನ್ನ ಬುರುಡೆಯ ಭಾರ, ನಿನ್ನ ಎದೆಯ್ಯ ಆಳ, ಇವಕ್ಕೆ ತಕ್ಕಂತೆ ದುಡಿ. ಯಾರು ಬೇಡ, ಅಂತಾರೆ?....ಇನ್ನೇನಯ್ಯ? ನಿನ್ನ ಆಸೆಯನ್ನೆಲ್ಲ ತೀರಿಸಿಕೊ! ನಿನ್ನ ಗೋಖಲೆಗೆ ದ್ರೋಹಮಾಡಬೇಡ.... ಅಂತು, ನೀನೂ ನಾನೂ ಒಟ್ಟಿಗೆ ಮುಳುಗಬೇಕು, ಒಟ್ಟಿಗೆ ತೇಲಬೇಕು.... ಅದಕ್ಕೇ ಚಿಕ್ಕಂದಿನಿಂದ ನಾನು ಫುಲ್‌ಬ್ಯಾಕ್ಕು, ನೀನು ಹಾಫ್‌ಬ್ಯಾಕು!...."

"ಏನಯ್ಯ ನೀನು ಹೇಳುತ್ತಿರುವುದು? ಕನ್ನಡಿಗರ ಮುಖಕ್ಕೆ ಕನ್ನಡಿ ಹಿಡಿಯುವುದಕ್ಕೆ....ಏನೋ ಒಂದು ತಂತ್ರ ಹುಡುಕಿದೆಯೋನೋ?"

"ಈಗಿನ ಕಾಲದಲ್ಲಿ, ಮಹೋಬ್ಳು! ಪತ್ರಿಕಾಕರ್ತನೇ ಟೀಕಾಚಾರ್ಯ; ನನ್ನ ಲೇಖನಿಯೇ ಕನ್ನಡಿಗರ ಕೂರಸಿ! ಕರೀಸ್ವಾಮಿ ಅಂತ ಅನ್ನಿಸಿಕೊಂಡು ತಿರುಪೆ ಎತ್ತುವುದು ನನಗೂ ಬೇಜಾರಾಯಿತು. ಮನುಷ್ಯ ಜನ್ಮ ಎತ್ತಿದ ಮೇಲೆ, ಹಾಲು, ಮೊಸರು, ಸ್ನೇಹಿತರು, ಸೇವಕರು, ಕೀರ್ತಿ, ಕಿರೀಟ...."

" ಹೌದೋ! ಆದರೆ, ದಿನಬೆಳಗಾದರೆ ಜನರನ್ನ ನೀನು ನಿನ್ನ ನಾಲಗೆ ಯಿಂದ ಚುಚ್ಚುತ್ತಾ ಇದ್ದರೆ, ನಿನ್ನ ಬಾಯಿಗೆ ಮೊಸರೋ....ಕೆಸರೋ...."

ಅವರೆದುರು, ರಾಯರ ಸ್ನೇಹಿತರಾಗಿದ್ದ ಸ್ವಾಮಿನಾಥ್ ಬರುತ್ತಿದ್ದುದನ್ನು ಕಂಡು, ಇಬ್ಬರೂ ದನಿಯನ್ನು ಕುಗ್ಗಿಸಿದರು. ಮಹಾಬಲರಾಯರು ರಿಟೈರಾದಮೇಲೆ, ಅವರ ಜಾಗವನ್ನಾಕ್ರಮಿಸಿದ ಕುಹಕಿ, ರಾಯರಿಗೆ ಪ್ರಿಯವಾಗಿದ್ದ ಹಲವು ವ್ಯವಸ್ಥೆಗಳನ್ನೂ ಕೆಲವರು ಗುಮಾಸ್ತೆಯರನ್ನೂ ಖಂಡಿಸಿ ಅಪಮಾನಗೊಳಿಸಿದ, ಎಂಬ ಸುದ್ದಿಯನ್ನೂ, ಅವರ ಭಾವಚಿತ್ರವನ್ನು ಕೆಳಕ್ಕಿಳಿಸಿ, ಭಾವನವರ ಮನೆಗೆ ರವಾನಿಸಲಿರುವುದನ್ನೂ, ರಾಯರಿಗೆ ಇತರರಿಗಿಂತ ಮೊದಲು ತಿಳಿಸಬೇಕೆಂಬ ಕುತೂಹಲದಿಂದ ಸ್ವಾಮಿನಾಥ್‌ರು ತುಟಿ ಅಗಲಿಸುತ್ತ ಬಂದರು. ಆದರೆ, ಶ್ವೇತಾಂಬರಧಾರಿಯಾದ ಕರೀಸ್ವಾಮಿಯನ್ನು ನೋಡುತ್ತಲೂ, ಸ್ವಾಮಿನಾಥ್‌ರ ಕೊರಳಿಗೆ ಮರಳು ಸುರಿದಹಾಗಾಯಿತು. " ಹಲೊ, ಹಲೋ " ಎಂದು ಓಡಿಬಂದವರು, " ಗುಡ್‌ಬೈ, ಗುಡ್‌ಬೈ " ಅಂತ, ರಸ್ತೆಯ ಎಡಕ್ಕೆ ತಿರುಗಿ ದೂರದ ಕಲ್ಲು ಬೆಂಚೊಂದಕ್ಕೆ ನಡೆದರು.

" ಮೊಸರೊ, ಕೆಸರೊ, ಅಂದೆಯಲ್ಲಾ ? "

" ಯಾರಂದರು ಮೊಸರೊ, ಕೆಸರೊ, ಅಂತ ? ಮೊಸರು ಕೆಸರು ಅಂತ ಹೇಳಿದವರು ಯಾರು ? ಯಾವುದು ?....ಓ ! ಹೌದು ! ನಾನೇ ಕೇಳಿದೆ, ಅಲ್ಲವೆ ? ನೀನು ಪೇಪರ್ ನಡೆಸಿದರೆ, ಹಣ ಬರುತ್ತದೆಯೆ, ಅಂತ ಕೇಳುವುದಕ್ಕೆ ಬದಲಾಗಿ, ಹಾಗಂದಿರಬಹುದು, ನಾನು ! "

" ನಿನಗದೆಲ್ಲ ಯಾಕೆ ? ಬಂದ ಹಣದ ಲೆಕ್ಕ, ಹೋದ ಹಣದ ಲೆಕ್ಕ ಇಡು, ಸಾಕು ! ನನಗೆ ಬೊಂಬಾಯಿ ಬರೋಡ ಕಡೆ ಬೇಕಾದಷ್ಟು ಲಕ್ಷಾಧಿಕಾರಿಗಳಿದಾರೆ....ಸಾವಿರ, ಹತ್ತು ಸಾವಿರ, ಅಂತ ತೆರುತ್ತಾರೆ....ಎಲ್ಲ, ನನ್ನ ಮದ್ದಿನಿಂದ ಬದುಕಿದವರು ! ನಷ್ಟಗಿಷ್ಟವಾದರೆ, ಅವರಿಗೊಂದು ತಂತಿ ರವಾನಿಸಿದರಾಯಿತು."

" ವೈದ್ಯ ಬೇರೆ ಬರುತ್ತದೋ ನಿನಗೆ ? ನೋಡು, ನನಗೆ ಈ ಬುರುಡೆ ತುದಿಯಲ್ಲಿ ಒಂದು ತೆರನ ಉರಿ...."

" ನಾನು ಕಟ್ಟದ ಆಟವಿಲ್ಲ, ಹಾಕದ ವೇಷವಿಲ್ಲ. " ಉದರನಿಮಿತ್ತಂ .ಬಹುಕೃತ ವೇಷಂ " ಮೂಷಿಕಾನಂದ ಅಂತ ಅನ್ನಿಸಿಕೊಂಡಮೇಲೆ ಅದಕ್ಕೆ

ತಕ್ಕ ಬಹಿರೂಪ ಕಟ್ಟಿದೆ. ಪ್ಲೇಗಿಗೆ ಔಷಧಿ ಅಂತ ಪ್ರಾರಂಭ. ವಾಸಿ ಆದರೆ, ನನ್ನ ಕೈವಾಡ! ಆಗಲಿಲ್ಲ...? ದೇವರ ಇಚ್ಛೆ....ಪೂರ್ವಜನ್ಮ ಕೃತಂ ಪಾಪಂ.... ಲಲಾಟ ಲಿಖಿತಂ....ಅಸಾರೇ ಸಂಸಾರೇ....ಪುನರಪಿ ಜನನಂ, ಇತ್ಯಾದಿ ಇದ್ದೇ ಇದೆ! ಆದ್ದರಿಂದ, ನನ್ನ ಮೇಲಿನ ಭಕ್ತಿ ಮಾಯವಾಗುವಹಾಗಿಲ್ಲ....ಜ್ಯೋತಿಷ್ಯ ಅಂದರೆ ನನಗೆ ತೃಣಸಮಾನ!.... ಬಾ! ಕೂತುಕೊಳ್ಳೋಣ ಹುಲ್ಲಿನ ಮೇಲೆ....ಈ ಕೊಬ್ಬಿದ ಮಂದಿ ಇದಾರಲ್ಲಾ ಇವರು ನಮ್ಮ ಬಡ ದೇಶದಲ್ಲಿ ಕುದುರೆ ಜೂಜು ಅಂತ ನಡೆಸುವುದು ಎಷ್ಟು ಅನುಕೂಲ ಅಂತೀಯಾ.... ಜ್ಯೋತಿಷ್ಯರಿಗೆ, ಸಾಮುದ್ರಿಕದವರಿಗೆ, ಹಕ್ಕಿ ಶಾಸ್ತ್ರ ಹಲ್ಲಿ ಶಾಸ್ತ್ರ, ಕವಡೆ ಶಾಸ್ತ್ರ ಬಲ್ಲವರಿಗೆ?....ಸುಗ್ಗಿ! ನೂರು ಇನ್ನೂರು, ದಿನವೂ ಹೊಡೆಯುವೆ, ನಾನೂನು; ಜೂಜುಗಾರರ ಜಾತಕ ನೋಡಿ, 'ನಿಮಗೆ ಅಶ್ವಿನೀಯೋಗ ಅನ್ನುವುದು.' ಅವರು ಹೆಣ್ಣು ಕುದುರೆಗಳ ಬೆನ್ನಮೇಲೆ ಗಂಟಿಡುತ್ತಾರೆ. ಲಾಭ ಬಂದರೆ, ನನಗೆ ಕೀರ್ತಿ! ಇದ್ದದ್ದೂ ಹೋಯಿತು ಅಂದರೆ, ಆಸಾಮಿ ಆತ್ಮಹತ್ಯೆ, ಚಂಚು ಗಂಡನಹಾಗೆ, ಗೊತ್ತೇ ಇದೆ.... ರೇಸ್ ಕುದುರೆಗಳಿಂದ ಕದ್ದ ಉಗುರಿನ ಚೂರು, ಬಾಲದ ಕೂದಲು, ಬಾಯಿ ನೊರೆ, ಹುರುಳಿ ಕಾಳು, ಅಂಗಿಯ ನೂಲು, ಕಡಿವಾಣದ ತೊಗಲು— ಎಲ್ಲವನ್ನೂ ತಂದುಕೊಟ್ಟು, ಅಮಾವಾಸೆ ರಾತ್ರಿ ಮಾಟ ಮಾಡಿಸುವರು, ನನ್ನ ಕೈಲಿ, ಕುದುರೆಗೆ ಹಿಪ್‌ತೀರಿಯ ಬರಲಿ, ರೇಸಿನ ದಿನ ಅಂತ,....ಜಾಣ ಮಂದಿ....! ಎಲ್ಲವನ್ನೂ ಪೇಪರಲ್ಲಿ ಹಾಕುತ್ತೇನೆ, ಸುಮ್ಮನಿರು! ರುಚಿ ರುಚಿಯಾಗಿರುತ್ತೆ...."

"ಎಲ್ಲಿಂದೆಲ್ಲಿಗೆ ನೀನು ನೆಗೆಯುತ್ತಿದೀಯಾ? ಕಾವಲಿಯಿಂದ ಕುಂಭೀ ಪಾಕಕ್ಕೇನೇ ಧುಮುಕುತ್ತಿದಿಯಲ್ಲೊ! ನೋಡು! ಜನಸೇವೆಯೇ ಜನಾರ್ದನ ಸೇವೆ....ಅದನ್ನ ಅಡಿಪಾಯವಾಗಿಟ್ಟುಕೊಂಡು, ಮೇಲೆ ಎಷ್ಟು ಬೇಕಾದರೂ ಕಟ್ಟಿಡ ಕಟ್ಟು...."

"ಅಡಿಪಾಯ ಅಡಿಪಾಯ ಅಂತ ಅದನ್ನ ಎಲ್ಲರಿಗೂ ಯಾವಾಗಲೂ ಕಾಣಿಸುವಹಾಗೆ ಕಟ್ಟುವುದಕ್ಕಾಗುತ್ತದೆಯೆ? ಇರುತ್ತದೆ ಅದು, ಮಣ್ಣೊಳಗೆ!"

"ಅಂತೂ, ಇದ್ದರೆ ಸರಿ!"

"ಇಲ್ಲದೆ ಎಲ್ಲಿ ಹೋಗುತ್ತೆ?"

"ಹಾಗಾದರೆ, ಮುಂದೆ ನಾನೇನು ಮಾಡಬೇಕು, ಹೇಳು."

"ಶಂಖವಾದ್ಯ ಪೇಪರನ್ನ ಅವರು ಮಾರುವುದರಲ್ಲಿದ್ದಾರಂತೆ....ಅದ ಕ್ಕೋಸ್ಕರ ಹಣ ಕೂಡಿಸಿದೇನೆ....ಎಲ್ಲ ಸಿದ್ಧವಾಗಿದೆ....ನೀನು ಕಾಗದಪತ್ರ ವ್ಯವಹಾರ ವಹಿಸಿಕೊಂಡುಬಿಡು! ನಿನಗೂ ಒಂದು ಕೆಲಸವಾಯ್ತು....ಸದಾ, ಮನೆಯಲ್ಲಿ ಹೆಂಡತಿ ಮುಖ ನೋಡುತ್ತ ಕೂತಿರುವುದೂ ಕೂಡ ಒಳ್ಳೆಯ ದಲ್ಲ....ನೀನು, ಶಂಖವಾದ್ಯದ ಮ್ಯಾನೇಜರು!....ಇಕೊ! ನಾಗರಾಜ ಅಲ್ಲೇ ಕೂತಿದಾನೆ. ಅವನನ್ನೂ ಕೂರಿಸೋಣ ಕಾಯಿ ಕುಡಿಕೆ ಕೊಟ್ಟು....ನಾಗರಾಜ! ಬಾ! ಇಲ್ಲಿ! ಇವರ ಪರಿಚಯ ಇದೆಯೋ ನಿನಗೆ?....ಹ....ಹ್ಞ....ಹ್ಞ.... ಇವರೇ ಹೊಸ ಆಡಳಿತಕ್ಕೆ ಬರಲಿರುವ ಶಂಖವಾದ್ಯದ ಮ್ಯಾನೇಜರು!..... ಕೈ ಮುಗಿ!.....ಮುಗಿಯೋ."

"ಅಪ್ಪ ಒಪ್ಪಿದನೆ?"

"ಒಪ್ಪದೆ....ಅವರು ತೆಪ್ಪಗಿರುವುದೇ ಒಪ್ಪಿಗೆಯ ಗುರುತಲ್ಲವೇನೊ?"

"ಬಹಳ ಸಂತೋಷ, ಅಪ್ಪ! ಅಮ್ಮ ಬೇರೆ ಇವತ್ತು ಬಹಳ ಒಳ್ಳೇವ ಳಾಗಿದಾಳೆ....ಅಪ್ಪ ಕೂಡ ಒಪ್ಪಿಬಿಟ್ಟ....ಸದ್ಯಃ, ನನ್ನ ಕೆಲಸ ಈಗ ಎಷ್ಟೋ ಹಗುರವಾಯಿತು. ಕುಣಿ ಕುಣಿಯುತ್ತ ನಡೆಸಿಕೊಂಡು ಹೋಗುತ್ತೇನೆ ಸಂಪಾ ದಕ ಎಂಬ ಜವಾಬ್ದಾರೀನ."

"ನಾಗರಾಜರಾವ್! ನೀವು ಸೊಕ್ಕಿಬಿಟ್ಟಿದೀರಿ! ಪತ್ರಿಕಾ ಪ್ರಪಂಚಕ್ಕೆ ನೀವೇಯೋ ನಿರಂಕುಶ ಪ್ರಭುಗಳು? ಸಂಬಂಧಪಟ್ಟವರನ್ನು ವಿಚಾರಿಸದೆ ಮಾಡದೆ, ಸ್ವಯಂ ಸಂಪಾದಿಸಿಬಿಟ್ಟಿರೇನು, ಸಂಪಾದಕಪದವಿಯನ್ನ!"

"ಸಂಬಂಧಪಟ್ಟವರಿಂದಲೇ ಬಂದದ್ದು ಆ ಪದವಿ!"

ರಾಮಯ್ಯಂಗಾರಿ ಬಿಳಿ ಷರ್ಟಿನ ಕಿಸೆಯಿಂದ ಒಂದು ಪರ್ಸನ್ನು ತೆಗೆದು, ಅದರ ಗುಂಡಿಗಳನ್ನು ಕಳಚಿ ಒಳಕೋಣೆಗಳನ್ನು ತೆರೆದು ಹತ್ತು ಸಾವಿರ ರೂಪಾಯಿಗಳ ಒಂದು ಚೆಕ್ಕನ್ನು ಗಾಳಿಯಲ್ಲಿ ಬೀಸಿ ನಾಗರಾಜನ ಮೂಗಿನ ನೇರಕ್ಕೆ ಹಿಡಿದ.

"ಹಿರಣ್ಯ! ಇಲ್ಲಿದೆ, ನೋಡು" ಅಂದ.

" ನರಸಿಂಹ ದೇವರು ಆಗಲೇ ಕೊಂಡುಕೊಂಡು ಬಿಟ್ಟರು.....ಒಂದು ಸಾವಿರ ಕಡವೆ ಕೊಟ್ರು! "

" ಯಾರು ? "

" ಶೀನಪ್ಪನವರು! ನನಗೋಸ್ಕರ...."

" ಎಲಾ........" ಎಂದು ಅಯ್ಯಂಗಾರಿ ಪ್ರಾರಂಭಿಸುವುದರೊಳಗೆ ನಾಗ ರಾಜ " ಕರೀಸ್ವಾಮಿಗಳೇ! ತಾಳ್ಮೆ! ತಾಳ್ಮೆ! " ಎಂದು ಕೂಗಿಕೊಂಡ. ಬಿಳಿ ಬಟ್ಟೆಗೆ ಬದಲಾಯಿಸಿ ಒಂದು ಗಂಟೆ ಕೂಡ ಕಳೆಯದ ಆತನಿಗೆ ಆ ಎಚ್ಚರಿಕೆ ಯನ್ನು ಭೇದಿಸಿ, ಕೇವಲ ಗೃಹಸ್ಥನಂತೆ, ಕುಪಿತನಾಗಿ ಬೈಗಳನ್ನು ಬೀರಲು ನಾಲಗೆ ಏಳಲಿಲ್ಲ........

" ಅಲ್ಲಿ ಹುಲ್ಲು ಇನ್ನೂ ಹಸುರಾಗಿ ಬೆಳೆದಿದೆ, ಬಾ " ಎಂದು ರಾಯರು ತಮ್ಮ ಬಾಲ್ಯ ಸ್ನೇಹಿತನನ್ನು ಸಾಗಿಸಿದರು. ನಾಗರಾಜ ಕಿಸೆಯಲ್ಲಿ ಸಿಗರೇಟ್ ಹುಡುಕುತ್ತ ಮರದ ಮರೆಗೆ ನಡೆದ.

# ಬಾಣಂತಿ ಮನೆ

ನಾಮಕರಣದ ದಿನ ಗೋಕುಲದ ಬಾಗಿಲಲ್ಲಿ, ಬಹಳ ವರ್ಷಗಳ ನಂತರದ ವಾಲಗ ಕೇಳಿಸಿತು. ಅಂದು ಅಲ್ಲಿ ಸಡಗರವೋ ಸಡಗರ. ಶ್ರೀಮಂತರ ಮನೆಯಲ್ಲಿ ಗಂಡುಮಕ್ಕಳಾದರೆ ಹೇಗೆ ಕೊಂಡಾಡುತ್ತಾರೆ, ನೋಡ್ರೋ, ಎಂದು ನೆರೆಹೊರೆಯ ಬಡವರು ಪರಸ್ಪರ ಮಾತನಾಡಿಕೊಂಡರು.

ಬೆಳಗಿನಿಂದಲೂ ಸರಸಮ್ಮನಿಗೆ ಒಂದೇ ವ್ಯಥೆ: ರಾಯರು ರಿಟೈರಾಗುವ ಮೊದಲೇ ಮೊಮ್ಮಗ ಹುಟ್ಟಬಾರದಾಗಿತ್ತೆ, ಅಂತ. ಆಗ, ಮಗುವಿಗೆ ಆಫೀಸ್ ಗುಮಾಸ್ತೆಯರಿಂದಲೂ, ಸಾಹೇಬರ ಸ್ನೇಹ ಸಂಪಾದಿಸಲು ಕಾತುರರಾದ ಲಕ್ಷ್ಮೀಪುತ್ರರಿಂದಲೂ, ಮಗುವಿಗೆ ಸಿಗುತ್ತಿದ್ದ ಉಡುಗೊರೆಗಳನ್ನೆಲ್ಲ ಎಣಿಕೆ ಹಾಕುತ್ತ, ನಾಗರಾಜನ ನಾಮಕರಣದ ದಿನ ಬಂದ ಬೆಳ್ಳಿ ಪಾತ್ರೆಗಳನ್ನು ನೆನೆದುಕೊಳ್ಳುತ್ತ, ಅವಳು ಬಿಸುಸುಯ್ಯುತ್ತಲೇ ಇದ್ದಳು. ನಾಗರಾಜನನ್ನು ನಾಲ್ಕು ವಯಸ್ಸಿಂದಲೂ ಬಲ್ಲ ನಾರಣಪ್ಪ ಕೂಡ ಅವತ್ತು ಯಾವುದೋ ಒಂದು ನೆಪ ನೆಯ್ದು ತಲೆ ತಪ್ಪಿಸಿಕೊಂಡುಬಿಟ್ಟಿದ್ದ. ಪೇಟೆ ಕೋಟೆಗಳಿಗೆ ಹೋಗಿ ಸಾಮಾನು ಸರಂಜಾಮು ತರುವುದು ಹಾಗಿರಲಿ, ಕಾಯಿಪಲ್ಯ ಕಡಿದು, ನೀರು ಸೇದಿ, ಅಡಿಗೆಗೆ ಸಹಾಯಮಾಡಿ, ಬಡಿಸಿ, ಕಡೆಗೆ ಎಂಜಲೆತ್ತುವುದಕ್ಕೂ ಕೂಡ, ಒಬ್ಬ ಗುಮಾಸ್ತೆ ಸಿಗಲಿಲ್ಲ! 'ಇವನು ಇಷ್ಟು ತಡವಾಗಿ ಹುಟ್ಟ ದಿದ್ದರೆ....' ಎಂದು ಐವತ್ತೆಂಟು ಸಲ ಅವಳು ಕೈ ಕೈ ಹಿಸುಕಿದಳು.

ಚಂಚು ಕೂಡ ಅವತ್ತು ಹೊತ್ತು ಮಾರಿ ಬಂದಳು. ಅವಳ ತಾಪತ್ರಯ ಅವಳಿಗೆ. ಅವಳ ಆಸ್ಪತ್ರೆಯಲ್ಲಿ ಹಾಸಿಗೆಗಳು ಸಾಲದು ಎಂದು ಸಮಿತಿಯ ವರು ಮೇಲಕ್ಕೆ ಬರೆದಾಗ, "ಹಾಸಿಗೆ ಇದ್ದಷ್ಟು...." ಎಂಬ ಹಳೆಯ ಗಾದೆಯೇ ಚಾಚು ತಪ್ಪದೆ, ಉತ್ತರರೂಪದಲ್ಲಿ ಕೆಳಕ್ಕಿಳಿಯಿತಂತೆ! ಔಷಧಿ ಉಂಡೇನು, ಕದ ತೆಗಿ, ಅಂತ ಬರುವವರ ಸಂಖ್ಯೆ ಬಹಳವಾಗಿ ಹೆಚ್ಚುತ್ತಿದೆ ಎಂಬ ಅಂಕಿ ಅಂಶಕೊಟ್ಟು, ಒತ್ತಾಯಪಡಿಸಲು ಆ ದಿನ ಬೆಳಗ್ಗೆ ಅವಳಿಗೆ ಅಲ್ಲೊಂದು ವಿಶೇಷ ಸಭೆ!

ಸುಮುಹೂರ್ತದಲ್ಲಿ, ಮಹಾಬಲ ಎಂಬ ನಾಮವನ್ನು ಮಗುವಿಗೆ ಇಟ್ಟಿದ್ದಾಯಿತು; ಹಿರಿಯರ ಹಾಗೂ ವೈದಿಕರ, ಆಶೀರ್ವಾದಗಳೂ ದೊರಕಿದುವು. ಆಹ್ವಾನಿತರಿಗೆಲ್ಲ ಭೋಜನ ಮಾಡಿಸಿದ್ದೂ ಆಯಿತು.

ಸರಸಮ್ಮ ಎಲೆ ಅಡಿಕೆ ಜಗಿಯುತ್ತ, ದೇಹಶ್ರಮ ಮಾನಸೋಲ್ಲಾಸ ಎರಡನ್ನೂ ತಾಳಲಾರದೆ, ಮುಂದಳಿಗೆಮೇಲೆ ಮಲಗಿದ್ದಳು. ಇದ್ದಕ್ಕಿದ್ದ ಹಾಗೆಯೇ, ಬಹು ದಿವಸದ ಬಿಕ್ಕಟ್ಟಿಗೆ ಪರಿಹಾರ ದೊರೆತವಳಂತೆ, ಅವಳ ಮಿದುಳು ತಿಳಿಯಾಯಿತು. "ಅಯ್ಯೋ! ಈ ಗಂಟನ್ನು ಸಡಲಿಸಲು ನಾನು ಇಷ್ಟು ಕಾಲ ಪೇಚಾಡಿದನೆ? ಈಗ ಹೋಗಿ ಅವಳನ್ನು ಮಾತಾಡಿಸಿ ಎಲ್ಲವನ್ನೂ ಸರಿಪಡಿಸಿ ಬಿಡುತ್ತೇನೆ!" ಎಂಬ ಸಂಕಲ್ಪ ಮುಖದಲ್ಲಿ ಮೂಡಿತು. ಅವಳು ಕೈಗಳನ್ನು ನೆಲಕ್ಕೆ ಊರಿ, ಎದ್ದಳು. ನೆಟ್ಟಗೆ, ನೀರಜಳ ಕೋಣೆಗೆ ಹೋಗಿ, ಮಗುವನ್ನು ಮತ್ತೊಮ್ಮೆ ನೋಡಿ, ನಲಿದಳು. ನೀರಜ ಗೋಡೆಯ ಪಕ್ಕಕ್ಕೆ ಒರಗಿಕೊಂಡು ನಿದ್ದೆಯ ಗಡಿಯ ಸುಂಕದ ಕಟ್ಟೆಯನ್ನು ಮುಟ್ಟಿದ್ದಳು.

"ಈ ಕಿಟಿಕಿ ಬಾಗಿಲನ್ನು ಮುಚ್ಚುತ್ತೇನೆ, ನೀರಜ! ಗಾಳಿ ವಿಪರೀತ!" ಎಂದು ಹೇಳುತ್ತ, ಅತ್ತೆಮ್ಮ ಒಳಕ್ಕೆ ಹೋದಳು. ಸೊಸೆ ಮಲಗಿದ್ದ ಮಗ್ಗಲು ಬದಲಾಯಿಸಿತು. ಸರಸಮ್ಮ ನೀರಜಳ ಪಕ್ಕದಲ್ಲೇ ಕುಳಿತಳು....ಅವಳ ಚರ್ಯೆ ನೀರಜಳಿಗೆ ಅಚ್ಚರಿಯುನ್ನುಂಟುಮಾಡಿತು.

"ನೋಡಮ್ಮ! ನನಗೆ ವಯಸ್ಸಾಯಿತು! ನೀನಿನ್ನೂ ನೂರು ವರ್ಷ ಬಾಳಿ ಬದುಕಿ ಈ ಬಂಗಲಿಯಲ್ಲಿ ದೀಪ ಹಚ್ಚಿ ಬೆಳಕು ಬೀರಬೇಕಾದವಳು. ನನಗೆ ಯಾರೂ ಇನ್ನು ಅಂಥ ಮಾತು ಹೇಳುವಹಾಗಿಲ್ಲ; ಇವತ್ತೋ, ನಾಳೆಯೋ, ಇವರನ್ನ ನೋಡಿಕೊಂಡು ಹೊರಡಬೇಕಾದವಳು, ನಾನು! ನನ್ನ ಕಾಲದ ನಾಜೋಕೇ ಬೇರೆ! ನನ್ನ ಕಾಲದ ಶೀಲ ಶಿಸ್ತು, ನನ್ನ ಕಾಲದ ಒಡವೆ ಒಯ್ಯಾರ, ನನ್ನ ಕಾಲದ ನಯ ನಡತೆ—ಒಂದೂ ಈಗ ಸರಿ ಹೋಗುವುದಿಲ್ಲ. ಅದು ನನ್ನ ತಪ್ಪಲ್ಲ, ನಿನ್ನ ತಪ್ಪಲ್ಲ, ಕಾಲಮಹಿಮೆ!.... ನೀನು ಆಸ್ಪತ್ರೆಯಲ್ಲಿದ್ದ ಹತ್ತು ದಿನಗಳೂ ಯೋಚನೆ ಮಾಡಿ ಮಾಡಿ ಕೊನೆಗೆ ಇವತ್ತು ಹೊಳೆಯಿತು ನೋಡು, ನಿಜ ಏನು ಅಂತ! ನೋಡಿಲ್ಲಿ, ನಿನ್ನ ಹಾಗೆ ಕುಣಿಯುವುದಕ್ಕೆ ನನ್ನ ಮೈಯಿಂದಾಗುತ್ತದೆಯೆ? ನಿನ್ನ ಹಾಗೆ ನನ್ನ

ಮನ ಕೂಡ ಹರ್ಷವಾಗಿಲ್ಲ. ನಿನ್ನ ನಯ ನಿನ್ನ ನಡತೆ ಸರಿ ಅಂತ ನನ್ನ ಮೆದುಳು ಒಪ್ಪುವುದಿಲ್ಲ. ಏಕೆ? ಹೇಳು, ನೋಡೋಣ!"

"ಕಾಲ ಮಹಿಮೆ."

"ಹುಂ. ಹಾಗನ್ನು! ಯಾಕೆ ಹೇಳುವುದಕ್ಕೆ ಬಂದೆ, ಅಂದರೆ, ನಾನು ಅತ್ತೆ, ನೀನು ಸೊಸೆ! ನಾನು ಈ ಮನೆಗೆ ಮೂವತ್ತೈದು ವರ್ಷ ಹಿಂದೆ ಬಂದು ಸೇರಿಕೊಂಡೆ; ನೀನು ಬಂದು ಹತ್ತು ವರ್ಷವಾಗಿಲ್ಲ. ಅತ್ತೆಗೊಂದು ಕಾಲ, ಅಂತ ದೇವರು ಸುಮ್ಮನೆ ಕೂತಿಲ್ಲ; ಸೊಸೆಗೂ ಒಂದು ಕಾಲ, ಅಂತ ಬರೆದಿಟ್ಟಿದಾನೆ!"

"ಅತ್ತೆಮ್ಮನವರೇ! ನೀವು ಸುಮ್ಮಸುಮ್ಮನೆ...."

"ತಾಳೆ! ನಾನು ಹೇಳಿ ಮುಗಿಸಿಬಿಡುತ್ತೇನೆ....ಇವತ್ತು ಒಳ್ಳೆ ದಿವಸ. ಎದುರಾಡಬೇಡ! ನಿನ್ನನ್ನ ನಾನೇದಾದರೂ ಅಂದರೆ, ಅದು ನಿನ್ನನ್ನು ಮಾತ್ರ ಕುರಿತದ್ದಲ್ಲ, ಈಗಿನ ಕಾಲದ ಹುಡುಗಿಯರನ್ನೆಲ್ಲಾ ಸೇರಿಸಿಕೊಂಡು ಬೈದದ್ದು, ಅಂತ ನೀನು ಸಮಾಧಾನ ತಂದುಕೊ! ರೇಗಿಕೊಂಡು ಕೂಸನ್ನು ಹೊಡಿಯ ಬೇಡ, ಕಂಡ್ಯ!....ಎರಡುಕೈ ಸೇರಿದರೆ, ಚಪ್ಪಾಳೆ, ಗುದ್ದಾಟ! ನನ್ನ ಹೊಟ್ಟೆ ಸಂಕಟವನ್ನ, ನನಗೆ ವಯಸ್ಸು ಏರಿದ ಕೋಪವನ್ನ, ನಾನು ಬೈದಾಡಿ ಬೈದಾಡಿ ತೀರಿಸಿಕೊಳ್ಳುತ್ತೇನೆ....ನೀನು ನನಗೆ, ಶ್ರೀ ಕೃಷ್ಣ ಹೇಳುವ ಹಾಗೆ, ಬರೀ ಒಂದು ನೆಪ ಮಾತ್ರ....ಅದನ್ನೆಲ್ಲ ನೀನು, ನಿನಗೆ ಅಂತ ಭಾವಿಸಿ ಕೊಂಡು, ಗಂಡನಿಗೆ ಹೇಳಿ, ಅವನ ಮನಸ್ಸು ಕೆಡಿಸಿ, ಅನ್ನ ನೀರು ತೊರೆದು, ಅಣ್ಣನಿಗೆ ಸಮಾಚಾರ ಬರೆದು, ಈ ಚಿಣ್ಣನನ್ನೂ ಕೊಂಕುಳಲ್ಲೇರಿಸಿ, ರೈಲು ಸ್ಟೇಷನಿಗೆ ಗಾಡಿ ಬಿಡಬಾರದು!...." ಎಂದು, ಅತ್ತೇಬಿಟ್ಟಳು, ಅತ್ತೆ. "ಇಲ್ಲ, ಅತ್ತೆ, ಇಲ್ಲ! ದೇವರಾಣೆಗೂ ಇಲ್ಲ! ಆದರೆ, ಒಂದು ವಿಷಯ, ನಾನೂ ಹೇಳಿ ಬಿಡುತ್ತೇನೆ, ಎದೆಯೊಳಗೆ ಅದುಮುವುದು ಯಾಕೆ? ನೀವು ಹೇಳಿದಹಾಗೆ, ನಿಮ್ಮ ಕಾಲದ ನಯ ನಡತೆ ನೀತಿ ನಾಗರಿಕತೆ ನನಗೂ ವಿಚಿತ್ರವಾಗಿ ವಕ್ರವಾಗಿ ಕಾಣಿಸುತ್ತದೆ. ಅದಕ್ಕೆ ನೀವು ಹೊಣೆಯೆ? ಅಲ್ಲ. ಕಾಲ ಮಹಿಮೆ ನಿಮ್ಮನ್ನೂ ನನ್ನನ್ನೂ ಒಂದೇ ಬೋನಿನೊಳಗೆ ಸೇರಿಸಿ ತಮಾಷೆ ನೋಡುತ್ತಾ ಇದೆ, ಜಗತ್ತು....ನನಗೂನೂ ನನ್ನ ಹೊಟ್ಟೆ ಉರಿ ಆರಿಸುವುದಕ್ಕೆ ಬಾಯಿಂದ ನಾಲ್ಕು ಮಾತು ಹೊರಬಂದರೇನೇ ಅನುಕೂಲ....ಒಳಗೇನೇ ಕುತಿಯುತ್ತಿದ್ದರೆ

ತಡೆಯುವುದು ಕಷ್ಟ. ನಿಮ್ಮನ್ನು ನಾನು ಬೈಯುತ್ತಿದ್ದರೂ, ನಾನು ಅನ್ನುವುದು ನಿಮ್ಮ ಕಾಲದವರನ್ನ....ಅಷ್ಟೆ, ಅಂತ ನೀವೂ ಸುಮ್ಮನಿರಿ...."

"ಹಾಗಾದರೆ, ನೀರಜ! ಇನ್ನೊಂದು ಉಪಾಯ ಹೇಳಿಕೊಡುತ್ತೇನೆ.... ಅದರಂತೆ ನುಡಿ! ನಿನ್ನ ಇಂಗ್ಲೀಷಿನಲ್ಲೇ ನೀನು ಬೈದುಕೊ! ತಂಟೆ ತಕರಾರಿಲ್ಲ. ನಿನಗೂ ಶಾಂತಿ! ನನಗೂ ನೆಮ್ಮದಿ."

"ಹುಂ. ಸರಿಯಾದ ಮಾತು! ಹಾಗೆಯೇ ಮಾಡುತ್ತೇನೆ, ಅತ್ತೆ!"

"ಸರಿ, ಮತ್ತೆ. ಇನ್ನು ಮೇಲೆ, ಹಾಗಾದರೆ, ಈ ಮನೇಲಿ ಬೈದಾಟ ಉಂಟು; ಜಗಳ ಇಲ್ಲ....ನೀನೂ ಒಪ್ಪಿದೀಯ; ನಾನೂ ಒಪ್ಪಿದೇನೆ....ಆ?.... ಈ ಕರಾರನ್ನು ಇಬ್ಬರೂ ಮೀರೋದಿಲ್ಲ, ಸರಿಯೇನೆ? ಸೊಟ್ಟ ಮೂತಿ?.... ಸೊಟ್ಟ ಮೂತಿ ಅಂತ ನನ್ನನ್ನ ನಮ್ಮತ್ತೆ ದಿನವೂ ನೂರುಸಲ ಬೈಯುವಳು.... ಅದರ ಮುಯ್ಯಿ ತೀರಿಸುವುದಕ್ಕೆ ನೀನೊಬ್ಬಳಾದರೂ ಸೊಸೆ ನನಗೆ ಸಿಕ್ಕಿದೆ ಯಲ್ಲಾ, ನನಗೆಷ್ಟು ಸಂತೋಷ, ಗೊತ್ತೆ? ನೀರಜಾ?"

"ಹೌದು, ಅತ್ತೆಮ್ಮನವರೆ! ಎಷ್ಟು ಜನ್ಮ ತಪಸ್ಸು ಮಾಡಿದೆನೋ ನಿಮ್ಮಂತಹ ಪೀಡೆ ಪಿಗ್ಮಿ ಕೈಲಿ ಹೀಗೆ ಆಶೀರ್ವಾದ ಮಾಡಿಸಿಕೊಳ್ಳೋಕೆ!"

"ಇಂಗ್ಲೀಷಿನಲ್ಲಿ ಆ ಮಾತು ತೀರ ಕೆಟ್ಟದ್ದು, ತಾನೆ?"

"ಹೌದು, ಅತ್ತೆಮ್ಮನವರೆ!"

"ನಿನ್ನ ಮನಸ್ಸು ಹಗುರವಾಯಿತು, ತಾನೆ?"

"ಓ!....ನಿಮ್ಮನ್ನ ಹಾಗನ್ನಬೇಕು ಅಂತ ಎಂಟು ವರ್ಷದಿಂದ ಕಾಯುತ್ತಾ ಇದ್ದೆ."

"ತೃಪ್ತಿ ಆಯಿತೆ?....ಇವತ್ತು?"

"ಹುಂ."

"ಒಟ್ಟಿನಲ್ಲಿ ನಾವಿಬ್ಬರೂ ಸಂತೋಷವಾಗಿದ್ದರೆ, ಸಾಕು; ಒಬ್ಬರಿ ಗೊಬ್ಬರು ಸದಾ ತಿವಿಯುತ್ತಿರುತ್ತಾರೆ, ಎಂಬ ಕೆಟ್ಟ ಹೆಸರು ಮಾತ್ರ ಬರ ಕೂಡದು, ಈ ಗೋಕುಲಕ್ಕೆ!....ನಾನು ಹೋಗಿ ಮಲಗಿಕೊಳ್ಳುತ್ತೇನೆ.... ಮಗುವನ್ನೆತ್ತಿಕೊಳ್ಳೆ! ಎಷ್ಟು ಹೊತ್ತಾಯ್ತು, ಪೂತನಿ!"

"ಹಿಟ್ಲರ ಅಪರಾವತಾರ ಕಣ್ರಿ, ನೀವು."

ಕೋಣೆಯಿಂದಾಚೆಗೆ ಹೋಗಿದ್ದ ಸರಸಮ್ಮನವರು ಸರಕ್ಕನೆ ಮತ್ತೆ ಒಳಕ್ಕೆ ಬಂದರು.

" ನೋಡು, ನೀರಜ ! ಇಂಗ್ಲೀಷ್ ಬರುವವರೆದುರು ನೀನು ನನ್ನ ಮಾನ ತೆಗೆಯಬೇಡ, ಜೋಕೆ ! "

" ಕನ್ನಡ ಬರುವವರೆದುರು ನೀವೂ ನನ್ನನ್ನು ಹೀಯಾಳಿಸಬಾರದು."

" ಹಾಗಾದರೆ, ಇನ್ನೊಂದು ಏರ್ಪಾಟು ಮಾಡಿಕೊಳ್ಳೋಣ....ಯಾರೆದುರಿಗೂ ಬೇಡ....ಎರಡನೆಯವರಿಗೆ ತಿಳಿಸುವುದೂ ಬೇಡ....ನಮ್ಮ ಕರಾರನ್ನು ನಾವು ಗುಟ್ಟಾಗಿ ನೆರವೇರಿಸಿಬಿಡೋಣ....ಊಟವಾಗುತ್ತಲೂ, ಗಂಡಸರಿಲ್ಲದ ಹೊತ್ತಿನಲ್ಲಿ, ನಮ್ಮ ವಾಗ್ವಾದಾನ ದಿನವೂ ಕಾಲುಗಂಟೆ ಹೊತ್ತಿನಲ್ಲಿ ಚಟಾಕಿ ಹಾರಿಸಿ ತೀರಿಸಿಬಿಡೋಣ...."

" ಹಾಗೆಯೇ ಆಗಲಿ! ಅದೇ ಕ್ಷೇಮ! ಮಿಕ್ಕ ಹೊತ್ತಿನಲ್ಲೆಲ್ಲ ಅನ್ಯೋನ್ಯವಾಗಿ ಇದ್ದುಬಿಡೋಣ."

* * * *

ನಾಗರಾಜನ ಸಂಪಾದಕತ್ವದಲ್ಲಿ ಶೀನಪ್ಪನವರ ' ಶಂಖವಾದ್ಯ', ನಾಮಕರಣದ ದಿನವೇ ಹೊರಟಿತು. ಅದರ ಭೂಂಕಾರವನ್ನು ತಜ್ಞರೆಲ್ಲರೂ ಮೆಚ್ಚಿದರು. ಸಾಮಾನ್ಯವಾಗಿ ಕನ್ನಡ ನಾಡಿನ ಎಲ್ಲ ಸಂದೇಶದಾತರೂ ಮುನ್ನುಡಿಕಾರರೂ ಸಂಪಾದಕರೂ ಅವನಿಗೆ ಶುಭಾಶಯಗಳನ್ನು ಕಳಿಸಿದ್ದರು. ಪತ್ರಿಕೆಗಳಲ್ಲಿ ತಮ್ಮನ್ನು ಕಟುವಾಗಿ ಟೀಕಿಸಬಾರದೆಂಬ ಭಯವಿದ್ದವರೆಲ್ಲರೂ ಜಾಹಿರಾತುಗಳ ಮೂಲಕವೂ ಚಂದಾ ಮೂಲಕವೂ ಶಂಖವಾದ್ಯಕ್ಕೆ ಪ್ರೋತ್ಸಾಹವಿತ್ತರು. ಆದರ್ಶ ಸಾಧನೆ ಎಂಬ ಮೊಲದ ಕೊಂಬಿನ ಅರಸುವಿಕೆಯನ್ನು ನಿರಾಕರಿಸಿ ವಾಸ್ತವ ಜಗತ್ತಿಗೆ ಎಂದೋ ಇಳಿದಿದ್ದ ನಾಗರಾಜನಿಗೆ ಪತ್ರಿಕೆ ನಡೆಯಿಸುವುದು ಕಷ್ಟವೆನಿಸಲಿಲ್ಲ. ಒಂದು ವಾರದೊಳಗೆ ಎರಡು ಸಾವಿರ ಪ್ರತಿಗಳು ಅಚ್ಚಾಗಿ, ಬೀದಿಯಲ್ಲೆಲ್ಲ ಹಾರಾಡಿದುವು. ಜನ್ಮಜನ್ಮಾಂತರಗಳಲ್ಲಿ ನಂಬಿಕೆಯನ್ನಿಟ್ಟಿರುವ ಭಾರತೀಯರಿಗೆ ಕಾಲ ಅನಂತ.ಆದ್ದರಿಂದ, ' ಶಂಖವಾದ್ಯ' ದಲ್ಲಿ ಪ್ರಕಟವಾದ ಸುದ್ದಿಗಳು ಕೊಂಚ ತಂಗಳಾದರೂ, ಖಾರ ಬೆರೆಸಿದರೆ ಸಾಕು, ಜನ ನುಂಗಿಬಿಡುತ್ತಿದ್ದರು. ಅಲ್ಲದೆ, ಮನುಷ್ಯನಿಗೆ ಇರುವುದೇ ಪಂಚ ಕೋಶಗಳು. ಅವನ ಅನ್ನಮಯದ ಸಂತೃಪ್ತಿಗೆ, ಅನ್ನದ ಅಭಾವದ ಸುದ್ದಿ ಸಾಕಾಗು

ತ್ತದೆ. ಪ್ರಾಣಮಯ ಕೋಶಕ್ಕೆ ಖೂನಿ ಕೇಸುಗಳು, ಪತ್ತೆದಾರಿ ಕಥೆಗಳು, ಪ್ರಾಣನಾಥ ನಾಥೆಯರ ಕಥೆಗಳು ಪ್ರಕಟವಾದರೆ ಸಾಕು. ಮನೋಮಯಕ್ಕೆ ಕೋಮುವಾರು, ವಾರ್ವೊಡಗಳು, ಇತ್ಯಾದಿ; ವಿಜ್ಞಾನಮಯದ ಶಾಂತಿಗೆ ಗೊಬ್ಬರ ಮಾಡುವ ಪದ್ಧತಿ, ಕೃತಕ ದೋಸೆಗಳ ತಯಾರಿಕೆ; ಆನಂದ ಮಯಕ್ಕೆ ಸಿನಿಮ ತಾರೆಯರ ಹುಸಿ ಜೀವನ—ಇಷ್ಟು ಒದಗಿಸಿದರೆ, ಸಾಮಾನ್ಯ ವಾಗಿ ಸಾಕಾಗುತ್ತದೆ....ಭವಿಷ್ಯದ ಜೊತೆಗೆ! ಕನ್ನಡ ನಾಡಿನ ದಿನ ಪತ್ರಿಕೆ ಗಳ ಪೈಕಿ, ಮುಂದಿನ ದಿನದ ಭವಿಷ್ಯಗಳನ್ನು ರಾಶಿ ರಾಶಿಯಂತೆ ಗಂಟೆಗೊಂದು ಪಾಠದಂತೆ ಮೊತ್ತ ಮೊದಲು ಸಿದ್ಧಮಾಡಿಸಿದ ಕೀರ್ತಿ 'ಶಂಖವಾದ್ಯ'ದ್ದು. ಮರುದಿನದ ತಮ್ಮ ಇಡೀ ಕಾರ್ಯ ಪರಿಪಾಟಿಯನ್ನು ಅನೇಕರು 'ಶಂಖವಾದ್ಯ'ದ ಪಾಠಗಳನ್ನು ಪರೀಕ್ಷಿಸಿದನಂತರವೇ ನಿರ್ಧರಿಸುತ್ತಿದ್ದರು! ಹೀಗೆ, ಆತ್ಮಶಕ್ತಿ ಕುಂದಿದ ಜನಾಂಗಕ್ಕೆ ನಾಗರಾಜರಾಯ ಆಕಾಶ ಶಕ್ತಿಯನ್ನು ನೀಡಿದ; ಕುರು ಡರ ಕಣ್ಣಿಗೆ ಹಲವರು ಕಪ್ಪು ಗಾಜಿನ ಕನ್ನಡಕವನ್ನು ಕಟ್ಟಿ, ಸಹಾಯ ಮಾಡುವಂತೆ!....

# ರೇಡಿಯೊ ರೂಂ

ಮಗನ ಚಾಕಚಕ್ಯತೆಯನ್ನೂ ಜಾಣತನವನ್ನೂ ಕಂಡು, ಮಹಾಬಲ ರಾಯರಿಗೆ....ಕೊಂಚ, ಅಸೂಯೆ ಅಂಕುರಿಸಿತು. ' ಶುದ್ಧ ದಡ್ಡ, ಪೋಲಿ ದನ, ಹಾಕಿ ಹೈದ, ಅಂತ ನಾನು ದೂರುತ್ತಾ ಇದ್ದ ಈ ಹುಡುಗ ಈಗ ಎರಡು ಸಾವಿರ ಸಲ ತನ್ನ ಹೆಸರನ್ನ ಪತ್ರಿಕೆಯಲ್ಲಿ ಒತ್ತಿ ಹಂಚುತ್ತಿದಾನಲ್ಲಾ, ದಿನವೂ!" "ಪಿ. ಎಂ. ನಾಗರಾಜರಾವ್!" ಆ ಹೆಸರಿನಲ್ಲಿ ನಾನು ಕೇವಲ, "ಎಂ!" 'ಮ' ಎಂದಾದರೂ ಇದ್ದಿದ್ದರೆ, ಜನ ನನ್ನನ್ನು ಒಬ್ಬ ಮಹನೀಯ ಮನುಷ್ಯ, ಎಂದಾದರೂ ಮನಗಂಡಾರು! 'ಎಂ' ಎಂದರೆ ಯಾವ ಮಾತು ನೆನಪಿಗೆ ಬರುತ್ತದೆ?....ಅಂತು, ಇನ್ನು ಮುಂದೆ, ಜನ ನನ್ನನ್ನ ನಾಗರಾಜರಾಯನ ತಂದೆ, ಅಂತಲೇ ಗೌರವಿಸುತ್ತಾರೋ, ಏನೊ?....ನನಗಾಗಿ ನಾನೇ ಜನಮನದಲ್ಲಿ ಒಂದು ಸ್ಥಾನ ಗಳಿಸಲು ನನ್ನ ಹಣೆಯಲ್ಲಿ ಬರೆಯಲಿಲ್ಲ....ಕರೆವಾಳವಾಗದೆ, ಮರವಾಳವಾದೆ. ಆ ಕರೀಸ್ವಾಮಿ ಕೂಡ ಕೈ ತಪ್ಪಿಹೋದ....ಅವನದೇನು ತಪ್ಪು! ಅವನಿಗೆ ಶಂಖವಾದ್ಯವೇ ದಕ್ಕಲಿಲ್ಲವಲ್ಲಾ!" ಎಂದು ರಾಯರು, 'ಭೋಜನಾಂತೆ ಪಿಬೇತ್ ತಕ್ರಂ' ಎಂಬಹಾಗೆ, ಕನವರಿಕೆ ಕೊನೆಯಲ್ಲಿ ಕೆಟ್ಟುಸಿರುಬಿಟ್ಟು, ಹುಳಿ ಮುಖ ಹೊತ್ತು ಕುಳಿತರು.

ರಾಯರಿಗೆ ರಾಮಯ್ಯಂಗಾರಿಯ ಭೇಟಿ ಆಗಿ ಏಳೆಂಟು ದಿನಗಳಾಗಿದ್ದುವು. ಅವನು ವೆಂಗಡೂರಿಗೆ ಧೂಮಕೇತುವಿನಂತೆ ಬಂದದ್ದು, ತನ್ನಲ್ಲಿ ಕಾರ್ಯೋತ್ಸಾಹವನ್ನು ಕೆರಳಿಸಿದ್ದು, ಮತ್ತೆ ಅಂತರ್ಧಾನವಾದದ್ದು, ಎಲ್ಲವನ್ನೂ ರಾಯರು ಚಿಂತಿಸುತ್ತ ಮಲಗಿದರು. "ಕನಸಿನಲ್ಲಿ ಸುಳಿದಹಾಗೆ ಸುಳಿದ ನಲ್ಲಾ, ಮಹರಾಯ! ನಿಜ, ಅಂತ ನಂಬುವುದೇ ಶ್ರಮವಾಗಿದೆ. ಕರೀಸ್ವಾಮಿ ನಿಜಕ್ಕೂ ಬೀಸ್ವಾಮಿ ಆದನೆ? ಇರಲಾರದು. ನಾನು ತಲೆಕೆಳಗಾಗಿ ನಿಂತದ್ದರ ಫಲವಿದ್ದಿರಬೇಕು, ಹಾಗೆ ತೋರಿದ್ದು. ಭ್ರಮೆ; ಬರೀ ಭ್ರಮೆ! ಅಯ್ಯೋ! ಅಟ್ಟೈರಾದರೆಮೇಲಾದರೂ ನಾನು ಒಂದು ಸಮಾಜೋದ್ಧಾರ ಕಾರ್ಯದಲ್ಲಿ, ಸಾರ್ವಜನಿಕ ಶಿಕ್ಷಣ ಕಾರ್ಯದಲ್ಲಿ, ನೆರವಾಗಬಲ್ಲೆ, ಲೆಕ್ಚಾಚಾರ ಮಾಡುವುದೂ ಒಂದು ಸೇವೆ, ಪತ್ರಿಕೆಗಳು ಪ್ರಪಂಚಕ್ಕೆ ಬಹು ಮುಖ್ಯ,

ಪ್ರಚಾರವೇ ಶಿಕ್ಷಣದ ಮೂಲ, ಪ್ರಚಾರಕ್ಕೆ ಪತ್ರಿಕೆಗಳು ಅಗತ್ಯ, ಪ್ರಚಾರವೊಂದೇ ಮನುಷ್ಯನಿಂದ ಸಾಧ್ಯ, ಮಾಡುವುದಕ್ಕೆ ಬರದೆ ಇದ್ದವರೆಲ್ಲ ಆಡಿಯಾದರೂ ಮೂರ್ಖ ನಾರಾಯಣರ ಸೇವೆ ಮಾಡಬೇಕು—ಎಂದೆಲ್ಲ ನನಗೆ ದಾರಿ ತೋರಿಸಿದ್ದ, ರಾಮಯ್ಯಂಗಾರಿ! ಮರಳಿಗೆ ಹೊರಳಿದ ಮಿಾನನ್ನು ಎತ್ತಿ, ಮತ್ತೆ ನೀರಿಗೆಸೆಯುತ್ತೇನೆ, ಎಂದು ಹೇಳಿದ್ದ....ಬಿಕೋ, ಎಂಬ ಈ ಬಂಗಲಿಯಲ್ಲಿ ಸುಮ್ಮನೆ ಗೊರಕೆ ಹೊಡೆಯುವುದಕ್ಕಿಂತ, ಅವನ ಜೊತೆ ಸೇರಿ, ಅವನ ಪೇಪರಿಗೆ ಮ್ಯಾನೇಜರಾದರೂ ಆಗಬಹುದಾಗಿತ್ತು....ಈ ಶೀನಪ್ಪ ಅದಕ್ಕೆ ಕಲ್ಲು ಹಾಕಿದ. ಹೋಗಲಿ, ಅಯ್ಯಂಗಾರಿ ಇನ್ನೇನಾದರೂ ಆಟ ಹೂಡಬಾರದಾಗಿತ್ತೆ? ಆಸಾಮಿಾನೇ ಪರಾರಿ!....ಆ ನಾರಣಪ್ಪನಿಗೂ ನಾಳೆಯೋ ಆಚೆನಾಳೆಯೋ ರಿಟೈರಾಗುತ್ತದಂತೆ....ಈ ತಿರುವು ಕುರ್ಚಿಯಲ್ಲಿ ಕೂತು, ಅವನನ್ನೂ ಎಡಮಗ್ಗುಲಲ್ಲಿ ನಿಲ್ಲಿಸಿ, ಮತ್ತೆ ಕಾಗದಗಳಿಗೆ ರುಜು ಹಾಕಬಹುದಾಗಿತ್ತು....ನಭೂತೋ ನಪ್ರೇತೋ, ಅಂತ, ಅಯ್ಯಂಗಾರಿ ಎದ್ದೇ ಬಿಟ್ಟನಲ್ಲಾ....ಹಿಂದಿನ ಕಾಷಾಯದ ಬಟ್ಟೆಯನ್ನೇ ಅವಲಂಬಿಸಿಬಿಟ್ಟನೋ, ಏನೊ....ಶೀನಪ್ಪ 'ಶಂಖವಾದ್ಯ' ಹೊಡೆದಾಗ........?"

"ನಾಗರಾಜರಾವ್!" ಎಂಬ ಕೂಗು ಹೊರಬಾಗಿಲಲ್ಲಿ ಸಿಡಿಯಿತು.... ರಾಮಯ್ಯಂಗಾರಿ!........?........!........ಕಾಲೇಜಲ್ಲಿದ್ದಾಗ, ರಾಯರ ಹೆಸರು ಹಿಡಿದು ಕೂಗುವಾಗಿನ ದನಿ! ಅದೇ ನಾದ. ಅಂದಿನದೇ ಕಂಚುಕಂಠ ಈಗಲೂ!....ಕೋಪ, ವೈರ, ಆಶಾಭಂಗ, ರವೆಯಷ್ಟು ಇರಲಿಲ್ಲ ಗಂಟಲಲ್ಲಿ. ತನ್ನ ಬಾಯಿಂದ ಶಂಖವಾದ್ಯವನ್ನು ಕಸಿದುಕೊಂಡನಲ್ಲಾ ನಾಗರಾಜ, ಎಂಬ ಕಾಳಿಕೆ ಕೂಡ ಈಷದಪಿ ಇರಲಿಲ್ಲ. ರಾಯರಿಗೆ ಆಶ್ಚರ್ಯವಾಯಿತು! "ಕೇಳಬೇಕೆ? ಸಂನ್ಯಾಸಿ ಶಿಕ್ಷಣ; ಶಮದಮಾದಿ ಪಾಠ; ಪರಿವ್ರಾಜಕರ ಪರಿ" ಎಂದು ಅವರು ಮೆಚ್ಚಿದರು.

ನಾಗರಾಜನನ್ನು ಕೂಗಿಕೊಂಡೇ ರಾಮಯ್ಯಂಗಾರಿ ರಾಯರು ಮಲಗಿದ್ದ ರೇಡಿಯೊ ರೂಮಿಗೆ ಬಂದ. ರಾಯರೆದ್ದು ಕೂತರು.

"ಎಲ್ಲಿಗೆ ಹೋಗಿದ್ದೆ? ಏನು ಕಥೆ? ಪುನಃ ಬೊಂಬಾಯಿ ರೇಸ್ ಕೋರ್ಸಿಗೇನೇ ಹೊರಟುಬಿಟ್ಟೆಯೋ, ಅಂತಿದ್ದೆ, ಕಣಯ್ಯ."

"ಇಲ್ಲ, ಇಲ್ಲ! ಶೀನಪ್ಪನ ಮನೆಯಿಂದ ಬರುತ್ತಾ ಇದೇನೆ, ಈಗ! ಅಲ್ಲೇ ಕವಳಧ್ವಂಸ, ನಿನ್ನೆ ಮೊನ್ನೆ ಎಲ್ಲ!"

"ಅವನು ಒಪ್ಪುವುದಿಲ್ಲ, ಕಣೊ! ಸುಮ್ಮನೆ ನಿನಗೆ ಭ್ರಾಂತು! ಕೆಲಸ ವಿಲ್ಲದೆ ಅರವತ್ತು ವರ್ಷದಿಂದ ಅನಾಮಧೇಯನಾಗಿ ಅಲೆಯುತ್ತಿದ್ದ! ಈಗ, ನನ್ನ ಮಗನಿಗೆ ಮಹೋಪಕಾರ ಮಾಡುವುದಕ್ಕೆ ಅವನೇ ಬೇಕಾಗಿ ಬಂತು, ನನ್ನಿಂದಾಗಲಿಲ್ಲ, ಎಂಬ ಜಂಭ ಬೇರೆ! ತಾನೂ ನಾಲ್ಕು ಜನರ ಕಣ್ಣಿಗೆ ಬೀಳುತ್ತಾನೆ....ಪತ್ರಿಕಾಕರ್ತ, ಅಂತ! ಬಿಡುತ್ತಾನೆಯೇ ಅವನು?"

"ಇಲ್ಲ! ಒಪ್ಪಿದ."

"ಹಾ? ಮಾರಿದನೆ. ನಿನಗೆ? ಕಾಸಿನ ತಾಪತ್ರಯ ಇಲ್ಲವಲ್ಲಾ ಅವನಿಗೆ ಅಷ್ಟೊಂದು?"

"ಮಾರು ಅಂತ ಕೇಳಿದವರು ಯಾರು, ಅವನನ್ನ?"

"ಮತ್ತೆ? ಏನು ನೀನು ಬೇಡಿದ್ದು, ಅವನ ಹತ್ತಿರ?"

"ಇನ್ನೊಂದು ಪೇಪರನ್ನ ಹೊರಡಿಸಲೇ ನಾನು, ಅಂತ ಅವನ ಒಪ್ಪಿಗೆ ಕೇಳಿದೆ."

"ಅದಕ್ಕೆ ಆ ಡೊಣೆನಾಯಕನ ಅಪ್ಪಣೆ ಯಾಕೆ?"

"ಬೇಕು, ಕಣೊ! ಕೆರೆಗೂ ಡೊಣೆಗೂ, ನೀರು ಬರುವುದು ಒಂದೇ ಚಿಲುಮೆಯಿಂದಾದರೆ, ಅಪ್ಪಣೆ ಬೇಡವೆ?"

"ನನಗೇನೂ ಅರ್ಥವಾಗಿಲ್ಲ. ಒಗಟೆ ಬಿಡಿಸು."

"ನೋಡು, ಮಹೋಬ್ಬು! ನನ್ನ ಹೊಸ ಪೇಪರಿನ ಹೆಸರು, 'ಪ್ರತಿಧ್ವನಿ.'"

"ಯಾವುದರ ಪ್ರತಿಧ್ವನಿ?"

"ಹುಂ! ಹಾಗೆ ಕೇಳು!....ನನ್ನ ಪ್ರತಿಧ್ವನಿ ಶಂಖವಾದ್ಯದ್ದು."

"ಅದರದೇ ಪ್ರತಿಧ್ವನಿಯಾದರೆ, ಹೊರಡಿಸುವುದು ತಾನೆ ಏಕೆ?"

"ಅದಕ್ಕೇ ನಿನಗೆ ಬುದ್ಧಿ ಇಲ್ಲ ಅನ್ನುವುದು....ದೇಶ ತಿರುಗಬೇಕು, ಅನ್ನೋದು....ತಂತ್ರಗಿಂತ್ರ ತಿಳಿದಿರಬೇಕು ಅನ್ನೋದು....ಸರಿಯಾಗಿ ಕೂತುಕೊ, ಹೇಳುತ್ತೇನೆ....ರೇಡಿಯೋ ಮೇಲೆ ಬೆರಳು ಆಡಿಸಬೇಡ.... ಅಪಶ್ರುತಿ ಹೊರಟೀತು! ನಿನ್ನ ಗೋಖಲೆರೋಗವೂ ಶಮನವಾಗುತ್ತೆ

ಇದರಲ್ಲಿ....ಸಿದ್ಧಮಾಡಿಕೊ, ನನ್ನ ಯೋಜನೇನ ನಿನ್ನ ಮೆದುಳಿಗಿಳಿಸುವುದಕ್ಕೆ! ....ನನ್ನ ಯೋಜನೆ ಪ್ರಕಾರ, ಶೀನಪ್ಪನಿಗೂ ಲಾಭ, ನಮಗೂ ಲಾಭ! ಅವನ ಪೇಪರೂ ತಿಂಗಳಿಗೆ ಸಾವಿರ ಏರುತ್ತೆ; ನಮ್ಮದೂ, ಏರುತ್ತೆ.... ಕಾಸೂ ಗಿಟ್ಟುತ್ತೆ; ಜ್ಞಾನವೂ ಪ್ರಸಾರವಾಗುತ್ತೆ....ಗೊತ್ತಾಯಿತೆ?"

"ಪಟ ಪಟ ಅಂತ ನಿನ್ನ ಭುಜಾನ ನೀನು ತಟ್ಟಿಕೊಂಡರೆ, ನನಗೇನೋ ತಿಳಿಯುತ್ತೆ?"

'ಶಂಖವಾದ್ಯ ಬೆಳಗ್ಗೆ ಹೊರಡುತ್ತೆ, ದಿನವೂ! ಪ್ರತಿಧ್ವನಿ, ಸಂಜೆ ಹೊರಡುತ್ತೆ, ಗೊತ್ತಾಯಿತೆ? ನನ್ನ ಪ್ಲಾನು ಏನು ಅಂದರೆ, ನಾವಿಬ್ಬರೂ ತೀರ ವಿರೋಧ! ಎಣ್ಣೆ ಶೀಗೇ! ಅವರು ಏತಿ, ಅಂದರೆ ನಾವು ಪ್ರೇತಿ. ಅವರು ವಸಿಷ್ಠ ಅಂದರೆ ನಾವು ವಿಶ್ವಾಮಿತ್ರ!....ಬೈದು ಬೈದು ಕೆಡವುತ್ತಾ ಇರೋದು ....ಜನಕ್ಕೆ ಮಾತ್ಸರ್ಯ ಹೆಚ್ಚುತ್ತೆ....ಅವರು ಬೆಳಗ್ಗೆ ನಮ್ಮನ್ನು ಬೈದು, ಬಂಡವಾಳಗಾರರೇ ಲೋಕೋದ್ಧಾರಕರು, ಅಂತಾರೆ. ನಾವು ಸಂಜೆ ಅವರನ್ನು ಬೈದು ಲೆನಿನೇ ಲೋಕರಕ್ಷಕ ಅನ್ನುತ್ತೇವೆ. ಅವರು ಬೆಳಗ್ಗೆ 'ಶಾಲೆಗಳಲ್ಲಿ ಬೆತ್ತದ ದುರುಪಯೋಗ' ಎಂದು ಲೇಖನ ಬರೆಯುತ್ತಾರೆ; ನಾವು ಸಂಜೆ 'ದಂಡಂ ದಶಗುಣಂ' ಅಂತ ಉತ್ತರ ಬರೆಯುತ್ತೇವೆ. ಅವರು ಪತ್ತೆದಾರಿ ಕಥೆ ಹಾಕಿದರೆ, ನಾವು ಅದೇ ಕಥೆಯನ್ನೇ ಹಿಂದಕ್ಕೆ ತಿರುಚಿ, ಖೂನಿ ಮಾಡಿದವನು ಸತ್ತವನೇ ಅಂತ ಸಾಧಿಸುತ್ತೇವೆ....ಹೀಗೆ....ಇಬ್ಬರಿಗೂ ಒಳಗೊಳಗೆ ಒಪ್ಪಂದ. ಹೊರಗೆ ಮಾತ್ರ ಮುಂಗುಸಿ-ಹಾವು!....ಹೇಗಿದೆ?"

"ನಾನೇನು ಹೇಳುವುದು?"

"ನೀನೇನೂ ಹೇಳಬೇಕಾದ್ದಿಲ್ಲ! ಎರಡಕ್ಕೂ ನೀನೇ ಮ್ಯಾನೇಜರ್! ನಾರಣಪ್ಪನೇ ನಿನ್ನ ಗುಮಾಸ್ತೆ! ಇಲ್ಲೇ, ಈ ಕುರ್ಚಿಯಲ್ಲೇ ಕೂತು ಕಚೇರಿ ನಡೆಯಿಸು!"

"ಅದು ಸರಿ! ಇದರಿಂದ, ಜನರಲ್ಲಿ ಜಗಳ ಮನಸ್ತಾಪ ವಾಗ್ವಾದ ವೃಥಾ ಟಗರ ಕಾಳಗ ಹೆಚ್ಚುತ್ತದೆಯೇ ಹೊರತು........"

"ಆ! ಏನಂದೆ! ಪ್ರತಿಯೊಂದು ವಾದ, ವಿಷಯ ಸಮಸ್ಯೆ ಯೋಜನೆ ತತ್ವ ಸಿದ್ಧಾಂತದ ಚರ್ಚೆಯಲ್ಲೂ ಅದರ ಎರಡು ಪಕ್ಷವನ್ನೂ ಜನ ಅರಿತು

ತೂಗಿ ವಿಚಾರಮಾಡಿ ಇತ್ಯರ್ಥಕ್ಕೆ ಬರುವುದಕ್ಕೆ, ಇದಲ್ಲವೇನಯ್ಯ ಉಪಾಯ? ಗೋಖಲೆಯವರು ಏನು ಹೇಳಿದರು? ರೀಸನ್! ಅಂದರೆ, ಮಥನ.... ಕ್ಷೀರ ಸಾಗರವನ್ನ....ಅವರು ಅಸುರರು....ನಾವು ದೇವತೆಗಳು....ನೀನು ಮಂಥರ.... ಕಡೆದು....

"ಸರಿ, ಸರಿ, ಗೊತ್ತಾಯ್ತು."

"ನಾನೂ ನಾಗರಾಜನೂ ಆಗಲೇ ಒಂದಿಷ್ಟು ಪಕ್ಷ ಪ್ರತಿಪಕ್ಷಗಳನ್ನು ಪಟ್ಟಿಮಾಡಿಕೊಂಡಿದೇವೆ....ಅವನು ಪಕ್ಷ ನಾನು ಪ್ರತಿಪಕ್ಷ....ನಾಳೆಯಿಂದ, ನೋಡು, ಉರಿಮಳೆ! ಅವನು ದ್ವೈತ ನಾನು ಅದ್ವೈತ, ಅವನು ದೇವ ನಾಗರಿ ನಾನು ರೋಮನ್ ಲಿಪಿ, ಅವನು ಜವಾಬ್‌ದಾರಿ ಸರ್ಕಾರ ನಾನು ಬೇರೆ ದಾರಿ ಸರ್ಕಾರ, ಅವನು ಜ್ಯೋತಿಷ್ಯ ನಾನು ಸಾಮುದ್ರಿಕಾ, ಅವನು ಅಮೇರಿಕಾ ನಾನು ರಷ್ಯಾ, ಅವನು ಷೇರ್ ಮಾರ್ಕೆಟ್ ಜೂಜು ನಾನು ಕುದುರೆ ಜೂಜು, ಅವನು ಸುಭಾಷ್ ಬೋಸ್ ಸ್ವರ್ಗಸ್ಥರಾಗಿಲ್ಲ ಅಂತ, ನಾನು ....ಗಿದಾರೆ ಅಂತ, ಅವನು ಕನ್ನಡ ನಾನು ಹಿಂದಿ, ಅವನು ಮಂಗಳೂರು ನಶ್ಯ ನಾನು ಮಡ್ಡಿ ನಶ್ಯ, ಅವನು ಕರ್ನಾಟಕ ನಾನು ಕರ್ಣಾಟಕ, ಹೀಗೆ, ಬಿಸಿ ಬಿಸಿಯಾಗಿ ಬಡಿದಾಡುವುದು,....ಬೀದಿಯಲ್ಲಿ ನೋಡಿಲ್ಲವೆ ನೀನು? ಇಬ್ಬರು ಗುದ್ದಾಡುತ್ತಿರುತ್ತಾರೆ, ಸಾವಿರ ಜನ ಸುತ್ತ ನಿಂತು ತಮಾಷೆ ನೋಡುತ್ತಿರುತ್ತಾರೆ; ಗೆಲ್ಲುವುದು ಯಾರು, ಸೋಲುವುದು ಯಾರು, ಅಂತ ಬಾಜಿ ಕಟ್ಟುತ್ತಾರೆ. ಪಟ್ಟುಗಳನ್ನೆಲ್ಲ ಮೆಚ್ಚುತ್ತಿರುತ್ತಾರೆ. ಹಾಗೇನೇ ಇದೂನೂ!.... ನಮ್ಮ ಈ ಪಿತೂರಿ ಮಾತ್ರ ಒಬ್ಬರಿಗೂ ಗೊತ್ತಾಗಕೂಡದು. ನಾರಣಪ್ಪ ನನ್ನ ಬೆಳಗ್ಗೆ ವೆಂಕಟರಮಣಸ್ವಾಮಿ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ, ಪ್ರಮಾಣಮಾಡಿಸಿದೆ! ನಾಳೆ ಬುಧವಾರ ಹೊರಡುತ್ತೆ 'ಪ್ರತಿಧ್ವನಿ'!.... ಈಗ, ನಿನ್ನ ಮನೆ ಪರಿಸ್ಥಿತಿ ಹೇಗಿದೆ?"

"ಶಾಂತವಾಗಿದೆ."

"ಹಾಗಾದರಿನ್ನೇನು? ನಿನ್ನ ಕೈಂಕರ್ಯ ಪ್ರಾರಂಭಿಸಬಹುದಲ್ಲಾ!"

"....ನಾನು ಬದುಕಿರುವಷ್ಟು ದಿನ ನೀನೂ ಬದುಕಿರಬಹುದು.."

"ಏನು?"

"ನಾನು ಬದುಕಿರುವಷ್ಟು ದಿನ....ಏನೂ ಇಲ್ಲ....ಯಾರೋ ಹೇಳಿದ ಮಾತು....ಹುಂ! ಹಾಗಾದರಿನ್ನೇನು?....ಬುಧವಾರ ಹೊರಡುತ್ತೋ, 'ಪ್ರತಿಧ್ವನಿ'?...."

"ಮಹೋಬ್ಳು!....ಆಗಬಹುದೇನಯ್ಯ?"

"ಆಗಬಹುದು! ಇದೂನೂ ಒಂದು ರೀತಿಯ ಭಾರತ ಸೇವೆ ತಾನೆ? ನನ್ನಿಂದ ಸಾಧ್ಯವಾದದ್ದು ಅಷ್ಟೆ, ಅಲ್ಲವೆ? ಮಥನ....ಮಥನಗೋಪಾಲ...."

ಆಗ, ಚಂಚು ಬಂದಳು. "ಅಕ್ಕಾ! ಅಕ್ಕಾ! ಒಂದು ಬಟ್ಟಲು ನೀರು ತೆಗೆದುಕೊಂಡು ಬಾ" ಎಂದಳು. ರಾಯರು ಎದ್ದು ಕುಳಿತರು. ನೀರು ಕುಡಿದು "ಏನೂ ಇಲ್ಲ! ಯಾರೋ ಒಬ್ಬರು ಹಳೇ ಸ್ನೇಹಿತರು ಬಹು ದಿವಸದಮೇಲೆ ಬಂದಹಾಗಾಯಿತು, ಅಷ್ಟೆ" ಎಂದರು.

* * * *

ಬುಧವಾರ "ಪ್ರತಿಧ್ವನಿ" ಹೊರಬಿತ್ತು. ಆ ದಿನ ಬೆಳಗ್ಗೆ 'ಶಂಖವಾದ್ಯ'ದಲ್ಲಿ ಪ್ರಕಟವಾಗಿದ್ದ ಸುದ್ದಿ ಅಭಿಪ್ರಾಯ ಊಹೆ ಪೋಹೆ ಎಲ್ಲಕ್ಕೂ ಅದರಲ್ಲಿ ತೀವ್ರ ಖಂಡನೆ ಇತ್ತು! ಎರಡು ಪತ್ರಿಕೆಗಳೂ ಸಾವಿರಗಟ್ಟಲೆ ಖರ್ಚಾದುವು. ಎರಡರಲ್ಲೂ ವಿಷಯಗಳ ಪ್ರತಿಪಾದನೆ ವಿಚಾರಪ್ಲುತವಾಗಿಯೂ ಮನಮೋಹಕವಾಗಿಯೂ ಇತ್ತು.

ಮರುದಿನ ಬೆಳಗ್ಗೆ ನಾಗರಾಜನ ಮಗುವಿಗೆ ದೇವಿ ಹಾಕಿಸುವುದಕ್ಕಾಗಿ ಚಂಚು ಗೋಕುಲಕ್ಕೆ ಬಂದಳು. "ಅಕ್ಕ! ನೀನು ಪುಣ್ಯಮಾಡಿದಿಯಾ! ಇಂಥ ಸೊಸೆಯರು ಸಾವಿರ ಮನೆಗಳಲ್ಲಿದಾರೆ; ಆದರೆ, ಅವರಿಂದ ಇಷ್ಟು ಗೌರವ, ವಿಶ್ವಾಸ, ಸಂಪಾದಿಸಿಕೊಂಡು ಸುಖವಾಗಿರೋ ಪುಣ್ಯ ಸಾವಿರದಲ್ಲೊಬ್ಬ ಅತ್ತೆಗೋ, ಇಬ್ಬರಿಗೋ!" ಎಂದಳು.

ಸರಸಮ್ಮನಿಗೆ ಹಿಡಿಸಲಾರದಷ್ಟು ಆನಂದ! ಹಾಗೆಯೇ, ರಾಯರ ರೂಮೊಳಕ್ಕೆ ಬಗ್ಗಿ ನೋಡಿದಳು. ಅದೇ ಹಳೇ ದೃಶ್ಯ; ಅದೇ ನಾರಣಪ್ಪ! ....ಆದರೆ, ರಾಯರ ಮೈಮೇಲೆ? ನೀಲೀ ಸೂಟು!....ಮದುವೇಲಿ ಮಾವ ಕೊಟ್ಟಿದ್ದು!

"ಥೂ! ಥೂ! ಆ ನೀಲೀ ಸೂಟು ಬೇಡಿ, ಅಂದ್ರೆ."

"ಇಲ್ಲ, ಇಲ್ಲ! ನೀನು ನೀಲೀ ಅಂತ ಗೇಲೀ ಮಾಡಿ, ಅಪಶಕುನ ನುಡಿಯಬೇಡ! ಅದೇ ಇರಲಿ! ಅದೇ ಬೇಕು."

ಸರಸಮ್ಮನಿಗೆ ನಗು ಬಂತು. "ಚಂಚೂ! ಚಂಚೂ! ಬಾ, ಇಲ್ಲಿ! ಈ ಅವತಾರಾನ ನೋಡು, ಕೊಂಚ" ಎಂದು ಕೂಗುತ್ತ, ಮೊಮ್ಮಗನನ್ನ ತೊಟ್ಟಿಲೊಳಗೆ ಮಲಗಿಸಿ, ವರಾಂಡಾಗೆ ಓಡಿದಳು.

* * * *

# ಉಷಾ ಸಾಹಿತ್ಯ ಮಾಲೆ, ಮೈಸೂರು

## ಮುಂದೆ ಬರಲಿರುವ ಕಾದಂಬರಿಗಳು

| | |
|---|---|
| ತತ್ತ್ವಜೀವಿ | —ಶ್ರೀ. ಎನ್. ಸೂರಪ್ಪ |
| ಹೇಮಾವತಿ | —ಶ್ರೀ. ಗೋರೂರ |

## ಈವರೆಗೆ ಅಚ್ಚಾಗಿರುವ ಕಾದಂಬರಿಗಳು

### ಮೊದಲನೆಯ ವರುಷ

| | | |
|---|---|---|
| ರಕ್ತ ತರ್ಪಣ | —ತ. ರಾ. ಸು. | ೧— ೮—೦ |
| ಪಯಣದ ಹಾದಿಯಲ್ಲಿ | —ಎಸ್. ಅನಂತನಾರಾಯಣ | ೧—೧೨—೦ |
| ಕಣ್ಣೀರು | —ಅ. ನ. ಕೃಷ್ಣರಾಯ | ೧—೧೨—೦ |
| ಅಸ್ಥಿಪಂಜರ | —ಆರ್ಚಿಕ ವೆಂಕಟೇಶ | ೩— ೦—೦ |
| ನಾಲ್ಕನೆಯ ಮನೆ | —ಎಂ. ನರೇಂದ್ರಬಾಬು | ೨— ೦—೦ |

### ಎರಡನೆಯ ವರುಷ

| | | |
|---|---|---|
| ಕನಸಿನ ಮನೆ | —ವಿ. ಎಂ. ಇನಾಂದಾರ | ೩— ೦—೦ |
| ಶಂಖವಾದ್ಯ | —ನಾ. ಕಸ್ತೂರಿ | ೧—೧೨—೦ |

### ಬಿಡಿಮುತ್ತು

| | | |
|---|---|---|
| ಮೂರಾಬಟ್ಟೆ* | —ವಿ. ಎಂ. ಇನಾಂದಾರ | ೩—೧೫—೦ |

*ಉಷಾ ಸಾಹಿತ್ಯ ಮಾಲೆಯ ಚಂದಾದಾರರಿಗೆ ಈ ಕಾದಂಬರಿ ಕೇವಲ ಮೂರು ರೂಪಾಯಿಗೆ ದೊರೆಯುತ್ತದೆ. ಅಂಚೆವೆಚ್ಚ ೬ ಆಣೆ ಪ್ರತ್ಯೇಕ.

---

ಉಷಾ ಪ್ರೆಸ್ :: ನೀಲಗಿರಿ ರೋಡ್ :: ಮೈಸೂರು

# ಉಷಾ ಸಾಹಿತ್ಯ ಮಾಲೆ, ಮೈಸೂರು

## ಬಿಡಿ ಮುತ್ತುಗಳು

# ಉಷಾ ಸ್ವಪ್ನ

೫೪ ಪ್ರೇಮಗೀತಗಳ ಸಂಗ್ರಹ

**ಕವಿ: ಎಸ್. ಅನಂತನಾರಾಯಣ**

ಶ್ರೀ ತೀ. ನಂ. ಶ್ರೀಕಂಠಯ್ಯ, ಎಂ.ಎ., ಅವರ ಮುನ್ನುಡಿಯೊಂದಿಗೆ
ಫೆಬ್ರುವರಿ ತಿಂಗಳಲ್ಲಿ ಪ್ರಕಟವಾಗುವುದು.

---

# ಕಾರಂತರ ಕಾದಂಬರಿಗಳು

**ಎಸ್. ಅನಂತನಾರಾಯಣ**

ಕಾರಂತರ ಕಾದಂಬರಿಗಳ ಬಗ್ಗೆ ಸುಮಾರು ೧೫೦ ಪುಟಗಳ ವಿಮರ್ಶಾ ಗ್ರಂಥ. ಪ್ರತಿ ಕಾದಂಬರಿಯನ್ನೂ ತೂಕದಿಂದ, ವಿಚಾರದೃಷ್ಟಿಯಿಂದ ವಿಮರ್ಶಿಸಿ, ಅವುಗಳ ಎಲ್ಲ ಗುಣದೋಷಗಳನ್ನು ವಿವೇಚಿಸುವ ವಿಮರ್ಶಾ ಗ್ರಂಥ.

ಮಾರ್ಚ್ ತಿಂಗಳಲ್ಲಿ ಹೊರಬೀಳುವುದು.

---

# ಮುತ್ತು—ಹವಳ

ಕನ್ನಡದ ಪ್ರಮುಖ ಬರಹಗಾರರ ಪ್ರಬಂಧಗಳು, ಹರಟೆಗಳು, ನಗೆ ಬರಹಗಳ ಸಂಗ್ರಹ. ಶಿವರಾಮ ಕಾರಂತ, ಅ. ನ. ಕೃಷ್ಣರಾಯ, ತೀ. ನಂ. ಶ್ರೀಕಂಠಯ್ಯ, ಗೋವಿಂದ ಪೈ, ವಿ. ಸೀತಾರಾಮಯ್ಯ, ಎ. ಎನ್. ಮೂರ್ತಿರಾಯರು, ಪು. ತಿ. ನರಸಿಂಹಾಚಾರ್, ಜಿ. ಪಿ. ರಾಜರತ್ನಂ, ನಾ. ಕಸ್ತೂರಿ, ಗೊರೂರು, ಡಿ. ಎಲ್. ನರಸಿಂಹಾಚಾರ್—ಇವರೇ ಅಲ್ಲದೆ ಮತ್ತೂ ಹಲವಾರು ನುರಿತ ಕನ್ನಡ ಬರಹಗಾರರ ಲೇಖನಗಳ ಸಂಗ್ರಹ.

ಯುಗಾದಿಯಂದು ಪ್ರಕಟವಾಗುವುದು

**ಸಂಪಾದಕರು: ಎಸ್. ಅನಂತನಾರಾಯಣ, ಬಿ.ಎ. (ಆನರ್ಸ್)**

## ನಾ. ಕಸ್ತೂರಿಯವರ ಇತರ ಗ್ರಂಥಗಳು

ಯದ್ವಾ ತದ್ವಾ

ಗಾಳಿಗೋಪುರ

ಚಕ್ರದೃಷ್ಟಿ

ಡೊಂಕುಬಾಲ

ಅಲ್ಲೋಲ—

—ಕಲ್ಲೋಲ

ಪಾತಾಳದಲ್ಲಿ ಪಾಪಚ್ಚಿ

ಅಣಕು—ಮಿಣುಕು

**ಬಂಗಾಳದಲ್ಲಿ ಕ್ರಾಂತಿ ಎಬ್ಬಿಸಿದ ಶರಚ್ಚಂದ್ರರ ವಿಚಾರಪೂರಿತ ಕಾದಂಬರಿ!**

# ಅಧಿಕಾರ

(ಶರಚ್ಚಂದ್ರರ ಬಂಗಾಳಿ ಕಾದಂಬರಿ 'ಪಥೇರ್‌ದಾಬಿ'ಯ ಅನುವಾದ)

೪೦೦ ಪುಟಗಳು; ರಸವತ್ತಾದ ಅನುವಾದ; ಅಂದವಾದ ಕಾಗದ; ಮುದ್ದಾದ ಮುದ್ರಣ; ಕ್ಯಾಲಿಕೊ ಹೊದಿಕೆ; ತ್ರಿವರ್ಣ ರಕ್ಷಾಕವಚ.

ಅನುವಾದಕರು:

**ಹೆಚ್. ಕೆ. ವೇದವ್ಯಾಸಾಚಾರ್, ಎಂ ಎ.**

**ಬೆಲೆ: ೫-೦-೦**

ಪ್ರಕಾಶಕರು:

**ಮೂರ್ತಿ ಏಜನ್ಸೀಸ್, ಮೈಸೂರು**

ಪ್ರಪಂಚದಲ್ಲಿ ಆಗುವ ಘಟನಾವಳಿಗಳು ನಿರ್ಜೀವವಲ್ಲ; ಯಾಂತ್ರಿಕವಲ್ಲ: ಅವಕ್ಕೆ ಸಂಪೂರ್ಣ ಹಿನ್ನೆಲೆ ಮಾನವನ ಅಂತರಂಗದಲ್ಲೇ ಅಡಕವಾಗಿದೆ ಎಂದು ಪ್ರತಿಧ್ವನಿಕೊಡುವ ಸಜೀವ ವಾತಾವರಣ 'ಅಧಿಕಾರ'ದಲ್ಲಿ ಮೂರ್ತಿವತ್ತಾಗಿದೆ.

ಕ್ರಾಂತಿಪೂರಿತವಾದ ವಾತಾವರಣವನ್ನು ಮನ ಮುಟ್ಟುವಂತೆ, ಹೃದಯ ಅನುಭವಿಸುವಂತೆ ತೋರುವ ಈ ಕೃತಿ ಶರಶ್ಚಂದ್ರರ ಪ್ರತಿಭೆಗೆ ಮಾತ್ರ ಸಲ್ಲತಕ್ಕುದಾಗಿದೆ.

'ಅಧಿಕಾರ'ದಲ್ಲಿ ಕ್ರಾಂತಿಪೂರಿತವಾದ ವಿಚಾರವಾಣಿ ಚಿತ್ರಿತವಾಗಿದೆ; ಇದಕ್ಕಾಗಿಯೇ ಬಂಗಾಳ ಸರಕಾರ ಈ ಕಾದಂಬರಿಯನ್ನು [illegible]ರ ವರೆವಿಗೂ ಬಹಿಷ್ಕರಿಸಿತ್ತು.

ಉಷಾ ಸಾಹಿತ್ಯ ಮಾಲೆಯ ಚಂದಾದಾರರಿಗೆ ಈ ಪುಸ್ತಕವನ್ನು ಅಂಚೆವೆಚ್ಚವಿಲ್ಲದೆ ಕಳುಹಿಸಲಾಗುವುದು.

ನಿಮ್ಮ ಚಂದಾ ಸಂಖ್ಯೆಯನ್ನು ಸೂಚಿಸಿ, ಐದು ರೂಪಾಯಿಯನ್ನು ಮನಿಯಾರ್ಡರ್ ಮೂಲಕ ಕೆಳಗಿನ ವಿಳಾಸಕ್ಕೆ ಕಳಿಸಿರಿ

**ಉಷಾ ಪ್ರೆಸ್**

**ನೀಲಗಿರಿ ರಸ್ತೆ, ಮೈಸೂರು**